ಭಾರತ – ದೇಶ ಮತ್ತು ಜನ

# ಭಾರತದ ಸಾಮಾನ್ಯ ಸರ್ಪಗಳು


**ರೋಮುಲಸ್ ವಿಟೇಕರ್**

ಅನುವಾದ

**ಎಚ್. ಎಸ್. ನಿರಂಜನಾರಾಧ್ಯ**





**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**

ಮುಖಪುಟ ಚಿತ್ರ : ಲೇಖಕರ ಸೌಜನ್ಯದಿಂದ

ISBN 81-237-3663-0

---

ಮೊದಲ ಮುದ್ರಣ : 2002 (ಶಕ 1923)

Original Title: Common Indian Snakes : A Field Guide *(English)*
Translation: Bharathada Samanya Sarpagalu *(Kannada)*
**ರೂ. 55.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್, ಹೊಸ ದೆಹಲಿ - 110016
ಇವರಿಂದ ಪ್ರಕಟಿತ.

---

ನನ್ನ ಗೆಳೆಯ
ನಟೇಶನ್‌ಗೆ
ಆತನ ಹಾಸ್ಯಪ್ರಜ್ಞೆ
ಹಾಗೂ
ಆರಣ್ಯಜ್ಞಾನವನ್ನು ನೆನೆಯುತ್ತಾ
ಈ ಪುಸ್ತಕವನ್ನು ಅರ್ಪಿಸಲಾಗಿದೆ.

"......... ಎಲ್ಲಾ ಸರೀಸೃಪಗಳು ವಿಷಕಾರಿ ಎಂಬ ವಿವೇಚನಾರಹಿತ ಗ್ರಹಿಕೆಯಿಂದ ಬಹುತೇಕ ಸರೀಸೃಪಗಳ ಬಗ್ಗೆ ಇರುವ ಭಯ ಮತ್ತಷ್ಟು ಹೆಚ್ಚಿದೆ. ಆದ್ದರಿಂದ ವಿಷಕಾರಿ ಸರೀಸೃಪಗಳ ವಿಷಕ್ಕೆ ಸೂಕ್ತವಾದ ಚಿಕಿತ್ಸೆಯನ್ನು ಕಂಡುಹಿಡಿಯುವುದು ಮೊದಲನೇ ಪ್ರಮುಖ ವಿಷಯವಾದರೆ, ವಿಷರಹಿತ ಸರೀಸೃಪಗಳಿಂದ (ಅವೇ ಹೆಚ್ಚಿನ ಸಂಖ್ಯೆಯಲ್ಲಿವೆ) ವಿಷಕಾರಿ ಸರೀಸೃಪಗಳನ್ನು ಗುರುತಿಸುವುದು ಎರಡನೇ ಪ್ರಮುಖ ವಿಷಯವಾಗುತ್ತದೆ...."

**ಪ್ಯಾಟ್ರಿಕ್ ರಸೆಲ್**

*ಆ್ಯನ್ ಅಕೌಂಟ್ ಆಫ್ ಇಂಡಿಯನ್ ಸರ್ಪೆಂಟ್ಸ್*
*ಕಲೆಕ್ಟೆಡ್ ಆನ್ ದ ಕೋರಮಂಡಲ್ ಕೋಸ್ಟ್, 1796*

# ಪರಿವಿಡಿ

# ಚಿತ್ರಗಳ ಪಟ್ಟಿ

## ಕಪ್ಪು ಬಿಳುಪು ಚಿತ್ರಗಳು

## ವರ್ಣ ಚಿತ್ರಗಳು

# ಮುನ್ನುಡಿ

ಹಾವುಗಳು ಸಹಜವಾಗಿ ಎಲ್ಲರನ್ನೂ ಸಂಮೋಹಗೊಳಿಸುವ ಜೀವಿಗಳು. ಅವು ಜೀವ ಜಗತ್ತಿನಲ್ಲಿ ಪ್ರಮುಖವಾದ ಭಾಗವಾಗಿವೆ. ಇವುಗಳ ವಿಷ, ವಿಶಿಷ್ಟ ರೀತಿಯ ತೆವಳಾಟ ಹಾಗೂ ಈಡುಜೀವಿಗಳನ್ನು ಬಂಧಿಸಿ ಹಿಸುಕುವ ತಂತ್ರಗಳಿಂದಾಗಿ ಪರಭಕ್ಷಕ ಪ್ರಾಣಿ ಸಮೂಹಗಳಲ್ಲಿ ಹಾವುಗಳು ಅತ್ಯಂತ ಪ್ರಮುಖ ಜೀವಿಗಳಾಗಿವೆ. ಭಾರತದ ಅರಣ್ಯಗಳು, ಮರಳುಗಾಡು, ಮೈದಾನ ಪ್ರದೇಶ ಹಾಗೂ ಬೆಟ್ಟಗುಡ್ಡಗಳಲ್ಲಿ ನೈಸರ್ಗಿಕ ಸಮತೋಲನವನ್ನು ಕಾಪಾಡಲು ಹಾವುಗಳ ಚಟುವಟಿಕೆ ಸಹಾಯಕವಾಗಿದೆ. ಮನುಷ್ಯನ 'ಪ್ರಗತಿ'ಯಿಂದಾಗಿ ಹಾವುಗಳ ಪ್ರಾಮುಖ್ಯತೆ ಹೆಚ್ಚಿದೆ. ಚಹಾ ತೋಟ, ಭತ್ತದ ಗದ್ದೆಗಳು, ಹಳ್ಳಿಗಳ ಗುಡಿಸಲುಗಳು ಹಾಗೂ ನಗರದ ಉಗ್ರಾಣಗಳು ಇಂದು ಹುಳ ಹುಪ್ಪಟೆ, ಕೀಟ, ಕಪ್ಪೆ, ಪಕ್ಷಿ ಮತ್ತು ಇಲಿಗಳಿಗೆ ನೂತನ ವಾಸಸ್ಥಳಗಳಾಗಿವೆ. ಆದ್ದರಿಂದ ಕೆಲವು ಕಡೆ ಈ ಜೀವಿಗಳ ಸಂಖ್ಯೆ ಹೆಚ್ಚಾಗಿ, ಅವು ಉಪದ್ರವಕಾರಿ ಜೀವಿಗಳಾಗಿವೆ.

ಹಾವುಗಳ ಆಹಾರವಾದ ಜೀವಿಗಳ ವಾಸಸ್ಥಳಗಳಲ್ಲಿನ ಬದಲಾವಣೆ ಅಪೇಕ್ಷಣೀಯ ವಾಗಿರುವಂತೆ ಕಾಣುತ್ತಿದೆ. ಹಾವುಗಳ ಸಂಖ್ಯೆ ಹೆಚ್ಚಾಗಿ ಅವು ಪೀಡಕ ಜೀವಿಗಳನ್ನು ನಿಯಂತ್ರಿಸಲು ಪ್ರಾರಂಭಿಸುವುದು ಮತ್ತು ಅದರಿಂದ ಮಾನವನ ಆಹಾರಕ್ಕೆ ರಕ್ಷಣೆ ಸಿಕ್ಕುತ್ತಿರುವುದರಿಂದ ಈ ಬದಲಾವಣೆ ಅಪೇಕ್ಷಣೀಯವೆಂದು ತೋರಬಹುದು. ಆದರೂ ಸಹ ಕೆಲವು ವಿಷಕಾರಿ ಹಾವುಗಳಷ್ಟೇ ಅಲ್ಲದೆ ವಿಷರಹಿತ ಹಾವುಗಳೂ ಭಯ ಭಕ್ತಿಯನ್ನುಂಟುಮಾಡಿರಬಹುದು. ಹಾಗೆ ನೋಡಿದರೆ ಹೆಚ್ಚಿದ ಕೃಷಿಯಿಂದ, ರಸಗೊಬ್ಬರ ಮತ್ತು ಕೀಟನಾಶಕಗಳ ವಿಶೇಷ ಬಳಕೆಯಿಂದ ಹಾವುಗಳ ದಟ್ಟಣೆಯಲ್ಲಿ ಉಂಟಾಗಿರುವ ವಾಸ್ತವ ಪರಿಣಾಮಗಳ ಬಗ್ಗೆ ಹಾಗೂ ಪ್ರತಿಯೊಂದು ಪ್ರದೇಶದಲ್ಲಿ ಕಂಡುಬರುವ ವಿವಿಧ ಹಾವುಗಳ ಬಗ್ಗೆ ನಮಗೆ ತಿಳಿದಿರುವುದು ತುಂಬ ಕಡಿಮೆ. ಅದಲ್ಲದೆ ನೈಸರ್ಗಿಕ ಆವಾಸಗಳ ಪೂರ್ಣ ನಾಶದಿಂದ ಅಳಿಯುತ್ತಿರುವ ಹಾವುಗಳ ಬಗ್ಗೆ ಹಾಗೂ ಅವು ಒಂದು ಕಾಲದಲ್ಲಿ ದವಸ ಧಾನ್ಯ ಮತ್ತು ಪೀಡಕಗಳ ನಡುವೆ ಸಮತೋಲನವನ್ನು ಕಾಪಾಡುವುದರಲ್ಲಿ ವಹಿಸುತ್ತಿದ್ದ ಪಾತ್ರದ ಬಗ್ಗೆ ನಮಗೆ ಸರಿಯಾದ ಮಾಹಿತಿ ಇಲ್ಲ. ಅಪರೂಪವಾಗಿ ಕಂಡುಬರುವ ಕೆಲವು ಹಾವುಗಳು (ಮತ್ತು ಸಾಮಾನ್ಯವಾಗಿ ಕಂಡುಬರುವ ಕೆಲವು ಹಾವುಗಳು) ಅತ್ಯಂತ ಕುತೂಹಲಕಾರಿಯಾದ ಹಾಗೂ ಹಲವಾರು ರೋಗರುಜಿನಗಳ

ಔಷಧ ಮೌಲ್ಯವಿರುವ ವಿಶಿಷ್ಟ ರಾಸಾಯನಿಕಗಳು ಮತ್ತು ವಿಷವನ್ನು ಉತ್ಪತ್ತಿ ಮಾಡುತ್ತವೆಂದು ನಮಗೀಗ ಗೊತ್ತಾಗಿದೆ. ಆದ್ದರಿಂದ ಹಾವುಗಳಿಗೆ ಆರ್ಥಿಕ ಹಾಗೂ ವೈಜ್ಞಾನಿಕ ಪ್ರಾಮುಖ್ಯತೆ ಇದೆ.

ಇವೆಲ್ಲ ಕಾರಣಗಳಿಂದಾಗಿ ಭಾರತದ ಹಾವುಗಳ ಬಗ್ಗೆ ಸರಳವಾದ ಕೈಪಿಡಿಯೊಂದು ಹೊರಬರುತ್ತಿರುವುದು ಸ್ವಾಗತಾರ್ಹ. ಈ ಪುಸ್ತಕವು ಹಾವುಗಳ ಬಗ್ಗೆ ಮತ್ತಷ್ಟು ಅಧ್ಯಯನ ಮಾಡಲು ಪ್ರೇರಣೆ ನೀಡುತ್ತದೆಂದು ಆಶಿಸಲಾಗಿದೆ. ಹೆಚ್ಚೆಚ್ಚು ಕಾರ್ಯಕರ್ತರು ಪ್ರಾಣಿಗಳನ್ನು ನಿಸರ್ಗದ ನಡುವೆ ವೀಕ್ಷಿಸುವುದು ಹಾಗೂ ಪ್ರತಿಯೊಂದು ಪ್ರಭೇದದ ವರ್ತನೆಯ ಬಗ್ಗೆ ಅರಿಯುವುದೂ ಮಾನವನ ಒಟ್ಟು ಜ್ಞಾನ ಭಂಡಾರಕ್ಕೆ ಕೊಡುಗೆ ಸಲ್ಲಿಸುತ್ತದೆ. ಅಲ್ಲದೆ ಅಂತಿಮವಾಗಿ ನಮ್ಮ ಅಸ್ತಿತ್ವದ ಅಡಿಪಾಯವಾದ ಭೂ ನಿರ್ವಹಣೆಯ ಬಗ್ಗೆ ಅರ್ಥಪೂರ್ಣವಾದ ತೀರ್ಮಾನಗಳನ್ನು ಕೈಗೊಳ್ಳಲು ಆಧಾರಗಳನ್ನೂ ಒದಗಿಸುತ್ತದೆ.

ಮಿಚಿಗನ್ ವಿಶ್ವವಿದ್ಯಾಲಯ **ಕಾರ್ಲ್ ಗ್ಯಾನ್ಸ್**
ಅನ್ ಆರ್ಬರ್

# ಪ್ರಸ್ತಾವನೆ

ಪ್ರಪಂಚದಲ್ಲಿ 2000ಕ್ಕೂ ಹೆಚ್ಚಿನ ಪ್ರಭೇದದ ಹಾವುಗಳಿವೆ. ಭಾರತದಲ್ಲಿ 200ಕ್ಕೂ ಹೆಚ್ಚು ಪ್ರಭೇದಗಳಿದ್ದು ಗಾತ್ರದಲ್ಲಿ 100 ಮಿಲಿಮೀಟರುಗಳ ಹುಳ – ಹಾವುಗಳಿಂದ ಹಿಡಿದು 6 ಮೀಟರುಗಳಷ್ಟು ಉದ್ದವಿರುವ ಹೆಬ್ಬಾವುಗಳವರೆಗೆ ವೈವಿಧ್ಯತೆಯಿದೆ. ಈ ಹಾವುಗಳು ಅನೇಕ ರೀತಿಯ ಆವಾಸಗಳಲ್ಲಿ – ಸಮುದ್ರಗಳು, ಮರಳುಗಾಡುಗಳು, ಜೌಗು ಪ್ರದೇಶಗಳು, ಸರೋವರಗಳು, ಕೃಷಿ ಭೂಮಿಯ ಪ್ರದೇಶಗಳು, ಪರ್ವತಗಳು, ಕೆಲವು ಹಿಮಪರ್ವತಗಳ ತಪ್ಪಲಿನಲ್ಲಿ ಹಾಗೂ 5000 ಮೀಟರುಗಳ ಎತ್ತರದವರೆಗಿನ ಹಿಮಾಲಯ ಪರ್ವತಗಳಲ್ಲಿ ಕಂಡುಬರುತ್ತವೆ.

ಈ ಪುಸ್ತಕದಲ್ಲಿ ಭಾರತದ ಎಲ್ಲ ಸರ್ಪಗಳನ್ನು ವಿವರಿಸುವ ಪ್ರಯತ್ನ ಮಾಡಿಲ್ಲ. ಒಬ್ಬ ಸಾಮಾನ್ಯ ಭಾರತೀಯ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳೂ ಸೇರಿದಂತೆ) ಕಾಣಬಹುದಾದ 30 ಪ್ರಾತಿನಿಧಿಕ ಹಾವುಗಳ ಬಗ್ಗೆ ಮತ್ತು ಒಂದಲ್ಲ ಒಂದು ಪ್ರದೇಶಕ್ಕೆ ವಿಶಿಷ್ಟವಾದ ಕೆಲವು ಪ್ರಭೇದಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ. ಇಲ್ಲಿ ವಿವರಿಸಿರುವ ಅನೇಕ ಹಾವುಗಳು ಭಾರತದ ಅಕ್ಕಪಕ್ಕದ ದೇಶಗಳಲ್ಲಿಯೂ ಕಂಡುಬರುತ್ತವೆ. ಆದರೂ ಈ ಪುಸ್ತಕದಲ್ಲಿ ಹಾವುಗಳ ವಿವರಣೆ ಹಾಗೂ ವಾಸದ ಪ್ರದೇಶಗಳನ್ನು ಭಾರತವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಬರೆಯಲಾಗಿದೆ. ಭಾರತದ ಪರ್ಯಾಯ ದ್ವೀಪ ಪ್ರದೇಶದಲ್ಲಿ ಸಾಮಾನ್ಯವಾಗಿರುವ ಪ್ರಭೇದಗಳಿಗೆ ಹೆಚ್ಚಿನ ಆದ್ಯತೆಯನ್ನು ಹಾಗೂ ಹಿಮಾಲಯ ಮತ್ತು ಈಶಾನ್ಯ ಭಾರತದಲ್ಲಿನ (ಅಸ್ಸಾಂ) ಪ್ರಭೇದಗಳಿಗೆ ಕಡಿಮೆ ಆದ್ಯತೆಯನ್ನು ನೀಡಲಾಗಿದೆ.

ಛಾಯಾಚಿತ್ರ, ಪ್ರಾಣಿಗಳ ವಿವರಣೆ, ಅವುಗಳ ಪರಿಸರ ಹಾಗೂ ಆವಾಸಗಳ ವಿವರಣೆಯ ಮೂಲಕ ಭಾರತದ ಹಾವುಗಳನ್ನು ಗುರುತಿಸುವ ಸರಳ ವಿಧಾನದ ಅಗತ್ಯವನ್ನು ಈ ಪುಸ್ತಕವು ಪೂರೈಸುತ್ತದೆಂದು ಆಶಿಸಲಾಗಿದೆ. ಅನೇಕ ದಂಶಕಗಳನ್ನು ನಾಶಮಾಡುವುದರಿಂದ ಆರ್ಥಿಕವಾಗಿ ಹಾವುಗಳು ಅತ್ಯಂತ ಪ್ರಮುಖವಾದ ಜೀವಿಗಳು. ದುರದೃಷ್ಟವಶಾತ್ ಕೆಲವು ಹಾವುಗಳು ವಿಷಕಾರಿಯಾದುದರಿಂದ ಅವುಗಳಿಂದ ತುಂಬ ಉಪಯೋಗವಿದ್ದರೂ ವೈದ್ಯಕೀಯವಾಗಿ ಆತಂಕವುಂಟು ಮಾಡಬಲ್ಲ ಜೀವಿಗಳಾಗಿವೆ. ಇದೊಂದು ವಿಷಯವನ್ನು ಬಿಟ್ಟರೆ ಹಾವುಗಳು ಆಕರ್ಷಕ ಜೀವಿಗಳು. ಬಹಳಷ್ಟು ಜನರ ಧಾರ್ಮಿಕ ಜೀವನ ಹಾಗೂ ಮೂಢನಂಬಿಕೆಗಳಲ್ಲಿ ಹಾವುಗಳಿಗೆ ಪ್ರಾತಿನಿಧ್ಯವಿರುವುದು ಈ ಹೇಳಿಕೆಗೆ ಸಾಕ್ಷ್ಯಾಧಾರ ಒದಗಿಸುತ್ತದೆ.

ಹಾವುಗಳ ಬಗ್ಗೆ ಅನೇಕ ಜನರಿಗೆ ಅವರೇ ಒಪ್ಪಿಕೊಳ್ಳುವಂತೆ ಅನಗತ್ಯವಾದ ಭಯವಿದೆ. ಸರೀಸೃಪಗಳ ಗುಂಪಿಗೆ ಸೇರಿದ ಹಾವುಗಳ ಬಗ್ಗೆ ಈ ಪುಟ್ಟ ಪುಸ್ತಕವು ಒಂದಷ್ಟು ಜನಪ್ರಿಯ ಆಸಕ್ತಿಯನ್ನು ಕೆರಳಿಸುತ್ತದೆಂದು ಭಾವಿಸಲಾಗಿದೆ.

ಈ ಪುಸ್ತಕವನ್ನು ಸಿದ್ಧಗೊಳಿಸಲು ಸಹಾಯ ಮಾಡಿದ ಅನೇಕ ವ್ಯಕ್ತಿಗಳಿಗೆ ನಾನು ಋಣಿ. ನಮ್ಮ ಒಡನಾಡಿಗಳಾದ ಇರುಳ ಬುಡಕಟ್ಟಿನವರಿಂದ ಹಾವುಗಳ ಸಂಗ್ರಹಣಾ ಕಾರ್ಯ ಮತ್ತು ಹಾವುಗಳ ಕ್ಷೇತ್ರ ಅಧ್ಯಯನ ಕಳೆದ ಎಂಟು ವರ್ಷಗಳಿಂದ ನಡೆದಿದೆ. ಹಾವುಗಳ ನೈಸರ್ಗಿಕ ಜೀವನದ ಬಗ್ಗೆ ಅವರಿಗಿರುವ ಜ್ಞಾನ ನಿಜವಾಗಿಯೂ ಆಶ್ಚರ್ಯವುಂಟು ಮಾಡುವಂಥದು. ನಮ್ಮ ಸರ್ಪವನದ ಸಿಬ್ಬಂದಿಯಲ್ಲಿ ಕೆಲವರು, ವಿಶೇಷವಾಗಿ ಸಾಲ್ಮನ್ ಪುಷ್ಪರಾಜ್ ಮತ್ತು ಎಂ. ಮಣಿಯವರು ಹಾವುಗಳನ್ನು ನೋಡಿಕೊಂಡು ಅವಲೋಕನಾ ದಾಖಲೆ ಸಿದ್ಧಪಡಿಸಿದ್ದಾರೆ. 1969ರಲ್ಲಿ ಚೆನ್ನೈನ ಸರ್ಪವನ ಪ್ರಾರಂಭವಾಯಿತು. ಅಂದಿನಿಂದಲೂ ಇದರ ಗೌರವ ಕಾರ್ಯದರ್ಶಿಯಾದ ಶ್ರೀ ಎ. ಎನ್. ಜಗನ್ನಾಥ್‌ರಾವ್ ಅವರು ಎಲ್ಲ ರೀತಿಯ ಸಹಾಯ ನೀಡಿದ್ದಾರೆ. ಸರೀಸೃಪಗಳಲ್ಲಿ ನನ್ನ ಆಸಕ್ತಿಯನ್ನು ಮುಂದುವರಿಸಲು ಪ್ರೋತ್ಸಾಹಿಸುತ್ತಿರುವ ನನ್ನ ತಾಯಿಗೂ ಮತ್ತು ನನ್ನ ಕುಟುಂಬದ ಸದಸ್ಯರಿಗೂ ಋಣಿಯಾಗಿದ್ದೇನೆ. ಇರುಳರನ್ನು ನನಗೆ ಪರಿಚಯಿಸಿದ ಹ್ಯಾರಿ ಮಿಲ್ಲರ್ ಅವರಿಗೆ, ಹಾವುಗಳನ್ನು ಗುರುತಿಸಲು ಸಿದ್ಧಪಡಿಸಿರುವ ವಿಧಾನವನ್ನು ಈ ಪುಸ್ತಕದಲ್ಲಿ ಅಳವಡಿಸಿಕೊಳ್ಳಲು ಅನುಮತಿ ನೀಡಿರುವ ಡಾ. ಶರ್ಮನ್ ಎ. ಮಿಂಟನ್ ಅವರಿಗೆ ಮತ್ತು ಹಾವು ಕಡಿತದ ಅಧ್ಯಾಯವನ್ನು ಓದಿ ವಿಮರ್ಶಿಸಿದ ಡಾ.ಎಚ್. ಅಲಿಸ್ಟರ್ ರೀಡ್ ಅವರಿಗೆ ನಾನು ಆಭಾರಿಯಾಗಿದ್ದೇನೆ. ಚೆನ್ನೈನ ಮಳೆಯ ಪ್ರಮಾಣದ ನಕ್ಷೆಯನ್ನು ಭಾರತದ ಹವಾಮಾನ ಸಂಸ್ಥೆಯು ನೀಡಿ ಉಪಕರಿಸಿದೆ.

ಹಸ್ತಪ್ರತಿಯನ್ನು ವಿಮರ್ಶೆ ಮಾಡಿದ ಮತ್ತು ಹಾವುಗಳ ಚಲನೆಯ ಭಾಗವನ್ನು ಉತ್ತಮ ಪಡಿಸಲು ಸಹಾಯ ಮಾಡಿದ ಪ್ರೊ. ಕಾರ್ಲ್ ಗ್ಯಾನ್ಸ್ ಅವರಿಗೆ ನಾನು ಆಭಾರಿ. ಬಾಂಬೇ ನೇಚುರಲ್ ಹಿಸ್ಟರಿ ಸೊಸಾಯಿಟಿಯ ನಿರ್ವಾಹಕ(ಕ್ಯುರೇಟರ್)ರಾದ ಶ್ರೀ ಜೆ. ಸಿ. ಡೇನಿಯಲ್ಸ್ ಅವರಿಗೆ ಅವರು ನೀಡಿದ ಅನೇಕ ಅಮೂಲ್ಯ ಸಲಹೆಗಳಿಗಾಗಿ ಋಣಿಯಾಗಿದ್ದೇನೆ. ಅದೇ ರೀತಿ ಶೆಲ್ಡನ್ ಕ್ಯಾಂಬಿಲ್ ಮತ್ತು ದಿವಂಗತ ಚಾರ್ಲ್ಸ್ ಇ. ಶಾ ಅವರು ತಮ್ಮ ಸ್ನೇಕ್ಸ್ ಆಫ್ ದ ಅಮೆರಿಕನ್ ವೆಸ್ಟ್ ಎಂಬ ಪುಸ್ತಕದಿಂದ ರೇಖಾಚಿತ್ರಗಳನ್ನು ಬಳಸಲು ಅವಕಾಶ ಕೊಟ್ಟಿದ್ದಕ್ಕಾಗಿ ಅವರಿಬ್ಬರಿಗೆ; ಹಾವುಕಡಿತದ ದತ್ತಕಗಳನ್ನು ಬಳಸಲು ಅನುಮತಿ ನೀಡಿದ ಡಾ. ಯೊಶಿಯಾ ಸವಾಯಿ ಮತ್ತು ಡಾ. ಎಂ. ಹೋಮ ಅವರಿಗೆ, ಕೊನೆಯದಾಗಿ ಈ ಪುಸ್ತಕವನ್ನು ಸಂಪಾದಿಸಿದ ಹಾಗೂ ಹಲವಾರು ಕರಡುಗಳನ್ನು ಬೆರಳಚ್ಚು ಮಾಡಿದ ನನ್ನ ಶ್ರೀಮತಿ ಜಹೀದಳಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ.

ರೋಮುಲಸ್ ವಿಟೇಕರ್



ಸಾಮಾನ್ಯ ಹುಳ-ಹಾವು

ನಿರುಪದ್ರವಿ

# 1. ಸಾಮಾನ್ಯ ಹುಳ–ಹಾವು

*ಟೈಫ್ಲಿನ ಬ್ರಾಹ್ಮಿನ (Typhlina bramina)*

**ವಿಶಿಷ್ಟ ಲಕ್ಷಣಗಳು :** ಪುಟ್ಟ ಹುಳುವಿನ ಆಕಾರದ ಶರೀರ; ನುಣುಪಾದ, ಹೊಳೆಯುವ ಹುರುಪೆಗಳು; ಮೊಂಡಾದ ತಲೆ ಮತ್ತು ಬಾಲ; ಶರೀರದ ಬಣ್ಣದಲ್ಲಿ ಯಾವುದೇ ವಿನ್ಯಾಸವಿಲ್ಲ.

**ಸರಾಸರಿ ಉದ್ದ:** 12.5 ಸೆಂ. ಮೀ., ಹುಟ್ಟಿದಾಗ: 3.5 ಸೆಂ. ಮೀ; ಗರಿಷ್ಠ : 17 ಸೆಂ.ಮೀ.(ಕೊಕ್ಕಿನ ಹುಳ ಹಾವು: 60 ಸೆಂ.ಮೀ.)

**ವಿವರಣೆ:** ಸಾಮಾನ್ಯ ಹುಳ–ಹಾವುಗಳು ಕೆಂಪು–ಕಂದು ಅಥವಾ ಕಪ್ಪು ಬಣ್ಣದವು. ಅವುಗಳ ನುಣುಪು ಹುರುಪೆಗಳು ಒಂದರ ಮೇಲೊಂದು ಅಗಲವಾಗಿ ವ್ಯಾಪಿಸಿಕೊಂಡಿದ್ದು ಕಾಮನಬಿಲ್ಲಿನ ಬಣ್ಣಗಳ ಹೊಳಪನ್ನು ಹೊಂದಿವೆ. ಮೇಲ್ನೋಟಕ್ಕೆ ಅವು ಎರೆಹುಳುಗಳಂತೆ ಕಾಣುತ್ತವೆ. ಬಾಲವು ತಲೆಯಂತೆಯೇ ಮೊಂಡಾಗಿದ್ದು ತುದಿಯಲ್ಲಿ ಒಂದು ಚಿಕ್ಕಮುಳ್ಳನ್ನು ಹೊಂದಿದೆ. ಕಂಡೂ ಕಾಣದಂತಹ ಚಿಕ್ಕ ಚುಕ್ಕೆಗಳಂತಿರುವ ಕಣ್ಣುಗಳಿದ್ದು, ಅವು ಹುರುಪೆಗಳಿಂದ ಮುಚ್ಚಲ್ಪಟ್ಟಿವೆ.

ಸಾಮಾನ್ಯವಾಗಿ ಶರೀರದ ತಳಭಾಗದ ಬಣ್ಣ ತಿಳಿಯಾಗಿರುತ್ತದೆ. ಸರ್ಪ ಜಗತ್ತಿನ ಅತೀ ಚಿಕ್ಕವಾದ ಹಾವುಗಳು ಇವೆಂದು ತೋರಿಸಲು, ಹುರುಪೆಗಳು ಮತ್ತು ನಾಲಗೆಯನ್ನು ವೃದ್ಧಿಸಿ ತೋರಿಸುವುದು ಅಗತ್ಯ. ನಮ್ಮಲ್ಲಿರುವ 14 ಪ್ರಭೇದಗಳ ಹುಳ–ಹಾವುಗಳಲ್ಲಿ (ಅಥವಾ ಅಂಥ ಹಾವುಗಳು) ಇದು ಅತಿ ಸಾಮಾನ್ಯವಾಗಿ ಕಂಡು ಬರುವ ಹಾವು. ಭಾರತದ ಹಾವುಗಳಲ್ಲಿಯೇ ಹುಳ–ಹಾವುಗಳು ಅತ್ಯಂತ ಚಿಕ್ಕ ಸರ್ಪಗಳು. ಅವುಗಳ ಬಗ್ಗೆ ತಿಳಿದಿರುವುದು ಸ್ವಲ್ಪವೇ. ಕೆಲವರು ಅವನ್ನು ಪ್ರಾಚೀನ ಅಥವಾ ಅವನತಿ ಹೊಂದಿದ ಹಾವುಗಳೆಂದು ಕರೆಯುತ್ತಾರೆ. ಆದರೆ ಅವು ಮಣ್ಣಿನೊಳಗೆ ಯಶಸ್ವಿಯಾಗಿ ಬದುಕುವುದಕ್ಕೆ ವಿಶೇಷ ಹೊಂದಾಣಿಕೆಗಳನ್ನು ಹೊಂದಿವೆ. ಅವುಗಳ ಇಂದ್ರಿಯ ವರ್ತನೆ ಮತ್ತು ಚಲನೆಯ ಕೌಶಲವು ವಿಜ್ಞಾನಿಗಳಿಗೆ ಅತ್ಯಂತ ಬೆರಗಿನ ವಿಷಯಗಳು. ಇತ್ತೀಚಿನವರೆಗೂ ಸಾಮಾನ್ಯ ಹುಳ–ಹಾವಿನ ವೈಜ್ಞಾನಿಕ ಹೆಸರು ಟೈಫ್ಲೋಪ್ಸ್ ಬ್ರಾಹ್ಮಿನಸ್ ಆಗಿತ್ತು. ಆದರೆ ಇದರ ಕುಲವು ಹಲವು ಉಪಗುಂಪುಗಳನ್ನು ಹೊಂದಿದೆ ಎಂಬುದನ್ನು ಅನಂತರ ಕಂಡುಹಿಡಿಯಲಾಗಿದೆ.

**ವಿತರಣೆ** : ಅಂಡಮಾನ್ ದ್ವೀಪಗಳೂ ಸೇರಿದಂತೆ ಭಾರತಾದ್ಯಂತ ಇದು ಪಸರಿಸಿದೆ. ಲಕ್ಷದ್ವೀಪದಲ್ಲಿರುವ ಏಕೈಕ ಹಾವು ಇದು. ಭಾರತದ ಬೆಟ್ಟದ ಸಾಲುಗಳಲ್ಲಿ ಸಮುದ್ರಮಟ್ಟದಿಂದ 1000 ಮೀಟರ್ ಎತ್ತರದವರೆಗೆ ಇದು ಕಂಡುಬರುತ್ತದೆ.

**ಆವಾಸ :** ಹುಳ–ಹಾವುಗಳು ಭೂಮಿಯೊಳಗಿನ ಇರುವೆ ಮತ್ತು ಗೆದ್ದಲುಗಳ ಗೂಡುಗಳಲ್ಲಿ ಜೀವಿಸುತ್ತವೆ. ಅವು ಮರದ ದಿಮ್ಮಿಗಳ ಕೆಳಗೆ, ತೇವಾಂಶವಿರುವ ಎಲೆಗಳ

ಕೆಳಗೆ ಹಾಗೂ ತೇವಾಂಶವಿರುವ ಅರಣ್ಯ, ಶುಷ್ಕ ಅರಣ್ಯ ಮತ್ತು ನಗರದ ಉದ್ಯಾನವನಗಳಲ್ಲಿನ ಕಳಿತ ಮಣ್ಣಿನಲ್ಲಿಯೂ ಕಂಡು ಬರುತ್ತವೆ.

**ಸ್ವಭಾವ :** ಸ್ವಫಲೀಕೃತ ವಿಧಾನದಲ್ಲಿ ಹುಟ್ಟಿದ ಬರೇ ಹೆಣ್ಣುಗಳೇ ಇರುವ ಪ್ರಭೇದ ಇದು. ಸಾಮಾನ್ಯ ಹುಳ-ಹಾವುಗಳಿಗೆ ಅನೇಕ ಶತ್ರುಗಳಿರುವುದರಿಂದ ಇವು ರಾತ್ರಿಯ ವೇಳೆಯಲ್ಲಿ ಮಾತ್ರ ಹೊರಕ್ಕೆ ಬರುತ್ತವೆ. ಅವನ್ನು ಹಿಡಿದಾಗ ಕೆಟ್ಟವಾಸನೆಯ ದ್ರವ್ಯವೊಂದನ್ನು ಸ್ರವಿಸುತ್ತವೆ ಮತ್ತು ವಿಷಚುಚ್ಚುವ ಹಾಗೆ ನಟಿಸುತ್ತಾ ತಮ್ಮ ಚೂಪಾದ ಬಾಲದಿಂದ ಚುಚ್ಚುತ್ತವೆ. ಅವುಗಳ ವಾಸನಾ ದ್ರವ್ಯವು ಬೇರೆ ಹಾವುಗಳಿಗೆ ಇವುಗಳ ಇರುವಿಕೆಯನ್ನು ತೋರ್ಪಡಿಸುತ್ತದೆ ಮತ್ತು ಇರುವೆ ಹಾಗು ಪರಭಕ್ಷಕಗಳನ್ನು ವಿಕರ್ಷಿಸುತ್ತದೆ.

**ಸಂತಾನ :** ಈ ಹಾವು ಸ್ವಫಲೀಕೃತ 5 ರಿಂದ 8 ಮೊಟ್ಟೆಗಳನ್ನಿಡುತ್ತದೆ. ಭಾರತದಲ್ಲಿ ಇವು ಮೊಟ್ಟೆಯಿಡುವ ಕಾಲ ಯಾವುದೆಂಬುದು ಗೊತ್ತಾಗಿಲ್ಲ.

**ಆಹಾರ :** ಹೆಸರೇ ಸೂಚಿಸುವಂತೆ ಇವು ತಾವು ವಾಸಿಸುವ ಸುರಂಗಗಳಲ್ಲಿರುವ ಹುಳುಗಳನ್ನು, ಮೃದು ಶರೀರದ ಲಾರ್ವಗಳನ್ನು, ಇರುವೆ ಮತ್ತು ಗೆದ್ದಲುಗಳ ಮೊಟ್ಟೆಗಳನ್ನು ತಿನ್ನುತ್ತವೆ. ಚೆನ್ನೈನ ಸರ್ಪವನದಲ್ಲಿ ಬಂಧನದಲ್ಲಿರುವ ಹುಳ-ಹಾವುಗಳು ಎರೆಹುಳಗಳನ್ನು ತಿಂದು ಬದುಕುತ್ತಿವೆ.

**ಪರಿಸ್ಥಿತಿ :** ಈ ಗುಂಪಿನ ಹಾವುಗಳ ವಿತರಣೆ ಹಾಗು ಉಳಿಯುವಿಕೆಗೂ ಮತ್ತು ಮಣ್ಣಿನ ತೇವಾಂಶ ಹಾಗೂ ಶಾಖಕ್ಕೂ ನೇರವಾದ ಸಂಬಂಧವಿದೆ. ಭಾರತದಲ್ಲಿ ಅರಣ್ಯನಾಶ ಹೆಚ್ಚುತ್ತಿರುವುದರಿಂದ ಬಹುಶಃ ಅರಣ್ಯಗಳಲ್ಲಿನ ಕೆಲವು ಹುಳ-ಹಾವುಗಳ ಪ್ರಭೇದಗಳು ನಾಶವಾಗಬಹುದು.

**ಸೂಚನೆ :** ಸಾಮಾನ್ಯ ಹುಳ-ಹಾವುಗಳು ಬಹುಶಃ ಜಗತ್ತಿನಲ್ಲಿಯೇ ಅತ್ಯಂತ ವಿಶಾಲವಾಗಿ ವಿತರಣೆಯಾಗಿರುವ ಹಾವುಗಳು. ಆಕಸ್ಮಿಕವಾಗಿ ಹೂಕುಂಡಗಳ ಮೂಲಕ ಜಗತ್ತಿನಾದ್ಯಂತ ವಿತರಣೆಯಾಗಿರುವ ಇವು ಸರ್ಪಗಳಿಲ್ಲದ ದ್ವೀಪಗಳಲ್ಲಿಯೂ ಉದಾಹರಣೆಗೆ, ಲಕ್ಷದ್ವೀಪ, ನ್ಯೂಜಿಲೆಂಡ್ ಮತ್ತು ಹವಾಯಿ ದ್ವೀಪಗಳಲ್ಲಿಯೂ ಮನೆ ಮಾಡಿಕೊಂಡಿವೆ.

*ನಿರುಪದ್ರವಿ*

## 2. ಪೆರೊಟೆಟ್‌ನ ಕವಚಬಾಲದ ಹಾವು

*ಪ್ಲೆಕ್ಟ್ಯುರಸ್ ಪೆರೊಟೆಟಿ (Plecturus Perroteti)*

**ವಿಶಿಷ್ಟ ಲಕ್ಷಣಗಳು :** ಪುಟಾಣಿ ಶರೀರ, ಚೂಪಾದ ತಲೆ ಮತ್ತು ಮೊಂಡಾದ ಬಾಲ, ನುಣುಪಾದ ಹೊಳೆಯುವ ಹುರುಪೆಗಳು, ಶರೀರದ ಕೆಳಭಾಗದಲ್ಲಿ ಸಾಮಾನ್ಯವಾಗಿ ಹೊಳೆಯುವ ಗುರುತುಗಳಿವೆ.

**ಸರಾಸರಿ ಉದ್ದ :** 44 ಸೆಂ.ಮೀ.ವರೆಗೆ, ವ್ಯಾಸ : 11 ಮಿ. ಮೀ.

**ವಿವರಣೆ :** ಪೆರೊಟೆಟ್‌ನ ಕವಚಬಾಲದ ಹಾವಿನ ಶರೀರಕ್ಕೆ ಕಂದು ಬಣ್ಣವಿದೆ. ಪ್ರತಿ



ಪೆರೊಟೆಟ್‌ನ ಕವಚಬಾಲದ ಹಾವು

ಹುರುಪೆಯ ಮಧ್ಯದಲ್ಲಿ ಕೆಂಪು ಅಥವಾ ಹಳದಿ ಬಣ್ಣವಿರುತ್ತದೆ. ಬಾಲದ ಕೆಳಭಾಗವು ಕಿತ್ತಳೆ ಬಣ್ಣವಿರುತ್ತದೆ. ಮರಿಹಾವುಗಳ ಮೇಲ್ಭಾಗದಲ್ಲಿ ಸಾಮಾನ್ಯವಾಗಿ ಹಳದಿ ರೇಖೆಯಿರುತ್ತದೆ. ಎಲ್ಲ ಯುರೋಪೆಲ್ಟಿಡ್ ಹಾವುಗಳಿಗೆ ಚೂಪಾದ ಬಲಿಷ್ಠವಾದ ತಲೆ ಹಾಗೂ ಪುಟಾಣಿ ಕಣ್ಣುಗಳಿರುತ್ತವೆ. ಚಿಕ್ಕದಾದ ಹಾಗೂ ಮೊಂಡಾದ ಬಾಲವಿದ್ದು ಬಾಲದ ತುದಿಯಲ್ಲಿ ಎರಡು ಚಿಕ್ಕ ಚುಕ್ಕೆಗಳಿರುತ್ತವೆ. ಸೂರ್ಯನ ಬೆಳಕಿನಲ್ಲಿಟ್ಟಾಗ ಈ ಹಾವು ಪಳಪಳ ಹೊಳೆಯುವುದನ್ನು ಚೆನ್ನಾಗಿ ನೋಡಬಹುದು. ಆದರೆ ವಾಸ್ತವವಾಗಿ ದೂಳಿನ ಕಣಗಳು ಹುರುಪೆಗಳಿಗೆ ಅಂಟಿಕೊಳ್ಳುವ ವಿಶೇಷತೆಯಿಂದ ಈ ಹೊಳಪು ಕಂಡುಬರುತ್ತದೆ. ಅನೇಕ ವೇಳೆ ಕವಚಬಾಲದ ಹಾವುಗಳನ್ನು ಎರೆಹುಳಗಳೆಂದು ತಪ್ಪಾಗಿ ಭಾವಿಸುತ್ತಾರೆ. ಆದರೆ ಎರೆಹುಳಗಳಂತಲ್ಲದೆ ಬಹುತೇಕ ಎಲ್ಲ ಕವಚಬಾಲದ ಹಾವುಗಳಿಗೆ ಸ್ಪಷ್ಟವಾಗಿ ಹೊಳೆಯುವ ಕೆಳಭಾಗಗಳಿರುತ್ತವೆ. ಶ್ರೀಲಂಕಾ, ದಕ್ಷಿಣ ಮತ್ತು ಮಧ್ಯ ಭಾರತದ ಬೆಟ್ಟ ಗುಡ್ಡಗಳಲ್ಲಿರುವ ಯುರೊಪೆಲ್ಟಿಡ್‌ಗಳು ಅಥವಾ ಕವಚಬಾಲದ ಹಾವುಗಳ 43 ಪ್ರಭೇದಗಳಲ್ಲಿ ಪೆರೊಟೆಟ್‌ನ ಕವಚಬಾಲದ ಹಾವು ಒಂದು ಪ್ರಭೇದಕ್ಕೆ ಸೇರಿದೆ.

**ವಿತರಣೆ :** ಪಶ್ಚಿಮ ಘಟ್ಟಗಳು, ಗೋವಾದ ದಕ್ಷಿಣ ಭಾಗ. ಎಂ. ಎ. ಸ್ಮಿತ್ ಅವರ ಪ್ರಕಾರ ಈ ಪ್ರಭೇದವು ನೀಲಗಿರಿ ಮತ್ತು ಅಣ್ಣಾಮಲೈ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಮಿಕ್ಕ ಪ್ರಭೇದಗಳು ಪಶ್ಚಿಮ ಘಟ್ಟಗಳಾದ್ಯಂತ ಅವುಗಳಿಗೆ ಪ್ರಿಯವಾದ ಸ್ಥಳ ಮತ್ತು ನಿರ್ದಿಷ್ಟವಾದ ಎತ್ತರದಲ್ಲಿ ಕಂಡು ಬರುತ್ತವೆ. ಈ ಹಾವುಗಳ ವಿತರಣೆಯನ್ನು ಮತ್ತೊಮ್ಮೆ ಅಧ್ಯಯನ ಮಾಡುವ ಅಗತ್ಯವಿದೆ.

**ಆವಾಸ :** ಯುರೋಪೆಲ್ಟಿಡ್‌ಗಳು ಅರಣ್ಯಸರ್ಪಗಳಾಗಿದ್ದು, ಸಾಮಾನ್ಯವಾಗಿ ಎಲೆಗಳು, ಕಳಿತ ಮಣ್ಣು, ಕಲ್ಲುಗಳು, ಕಾಡುಗಳು ಮರದ ದಿಮ್ಮಿಗಳಲ್ಲಿನ ಮತ್ತು 10 ರಿಂದ 30 ಸೆಂ. ಮೀ. ಆಳದ ಮಣ್ಣಿನ ಬಿಲಗಳಲ್ಲಿ ವಾಸಿಸುತ್ತವೆ. ವರ್ಷದ ಶುಷ್ಕ ದಿನಗಳಲ್ಲಿ, ಇವು ಮತ್ತಷ್ಟು ಆಳದಲ್ಲಿ ಬಿಲ ಕೊರೆಯಬಹುದು.

**ಸ್ವಭಾವಗಳು :** ಯುರೋಪೆಲ್ಟಿಡ್‌ಗಳು ಬಿಲಗಳಲ್ಲಿ ವಾಸಿಸುವ ಜೀವಿಗಳಾಗಿರುವುದರಿಂದ, ಅವು ಬಹಳಷ್ಟು ಕಾಲವನ್ನು ಮಣ್ಣಿನೊಳಗೇ ಕಳೆಯುತ್ತವೆ. ರಾತ್ರಿಯ ವೇಳೆ ಅವು ಮೇಲಕ್ಕೆ ಬರಬಹುದು. ಮಳೆ ಬೀಳುವಾಗ ಅವು ಚಟುವಟಿಕೆಯಿಂದಿರುವುದನ್ನು ನಾವು ನೋಡಿದ್ದೇವೆ. ಕೈಯಲ್ಲಿ ಹಿಡಿದಾಗಲೂ ಈ ಹಾವುಗಳು ಕಚ್ಚುವುದಿಲ್ಲ.

**ಸಂತಾನ :** ಕವಚಬಾಲದ ಹಾವುಗಳು 3 ರಿಂದ 5 ಮರಿಗಳನ್ನು ಹಾಕುತ್ತವೆ.

**ಆಹಾರ :** ಬಂಧನದಲ್ಲಿದ್ದಾಗ ತಿನ್ನುವಂತೆ ಕವಚಬಾಲದ ಹಾವುಗಳು ಎರೆಹುಳ ಮತ್ತು ಕೀಟಗಳ ಮೊಟ್ಟೆಗಳನ್ನು ತಿನ್ನುತ್ತವೆ.

**ಪರಿಸ್ಥಿತಿ :** ಅವುಗಳ ಜೀವಶಾಸ್ತ್ರದ ಬಗ್ಗೆ ನಾವು ಯಾವುದನ್ನಾದರೂ ಅಧ್ಯಯನ ಮಾಡುವ ಮೊದಲೇ ಬೆಟ್ಟ ಗುಡ್ಡಗಳಿರುವ ಅರಣ್ಯನಾಶವು ತೀವ್ರವಾಗಿ ಹೆಚ್ಚುತ್ತಿರುವುದರಿಂದ ಕವಚಬಾಲದ ಹಾವುಗಳು ಹಾಗೂ ಅಜ್ಞಾತವಾಗಿರುವ ಅಸಂಖ್ಯಾತ ಚಿಕ್ಕಪುಟ್ಟ ಅರಣ್ಯ ಜೀವಿಗಳು ನಾಶಹೊಂದುವ ಸಾಧ್ಯತೆಯಿದೆ.

# 3. ಭಾರತದ ಶಿಲಾ ಹೆಬ್ಬಾವು

*ಪೈಥಾನ್ ಮೊಲುರಸ್ (Python molurus)*

**ವಿಶಿಷ್ಟ ಲಕ್ಷಣಗಳು :** ಬೃಹತ್ತಾದ, ದಪ್ಪನೆಯ ಶರೀರ, ನುಣುಪಾದ ಹುರುಪೆಗಳು, ಹೊಳೆಯುವ ಮಚ್ಚೆಗಳ ಚಿತ್ತಾರ. ಸಾಮಾನ್ಯ ಉದ್ದ : 3 ಮೀ. ; ಹುಟ್ಟಿದಾಗ : 50 ಸೆಂ.ಮೀ. ; ಗರಿಷ್ಠ : 6 ಮೀ.

**ವಿವರಣೆ :** ಭಾರತದ ಶಿಲಾ ಹೆಬ್ಬಾವು ಬೃಹತ್ ಶರೀರದ, ನುಣುಪು ಹುರುಪೆಗಳ ಸರ್ಪವಾಗಿದ್ದು ಬಾಣದ ತುದಿಯಂತಹ ತಲೆ ಮತ್ತು ಮೋಟು ಬಾಲ ಹೊಂದಿದೆ. ಮಚ್ಚೆಗಳ ವಿನ್ಯಾಸವು ಹಳದಿಯಿಂದ ಕಡುಕಂದು ಬಣ್ಣದವರೆಗೆ ಇರಬಹುದು. ಪಶ್ಚಿಮ ಘಟ್ಟಗಳ ಮತ್ತು ಅಸ್ಸಾಂನ ಬೆಟ್ಟಗುಡ್ಡಗಳ ಅರಣ್ಯಗಳಲ್ಲಿರುವ ಹೆಬ್ಬಾವುಗಳು ದಟ್ಟವಾದ ಬಣ್ಣ ಹೊಂದಿವೆ. ಆದರೆ ದಕ್ಷಿಣ ಭಾರತ ಮತ್ತು ಪೂರ್ವ ಕಡಲ ಪ್ರದೇಶಗಳಲ್ಲಿರುವ ಹೆಬ್ಬಾವುಗಳು ಸಾಮಾನ್ಯವಾಗಿ ತಿಳಿಯಾದ ಬಣ್ಣ ಹೊಂದಿರುತ್ತವೆ. ಶರೀರದ ತಳಭಾಗವು ಬಿಳುಪು, ಹಳದಿ ಅಥವಾ ತಿಳಿ ಕಿತ್ತಳೆ ಬಣ್ಣವಿರುತ್ತದೆ. ಹೆಬ್ಬಾವುಗಳಿಗೆ ಗುದದ್ವಾರದ ಎರಡೂ ಕಡೆಗಳಲ್ಲಿ ಕಾಲುಗಳ ಅವಶೇಷಗಳಾದ 'ಹಿಮ್ಮಡಿ ಮುಳ್ಳು'ಗಳಿವೆ. ಗಂಡು ಹೆಬ್ಬಾವುಗಳಲ್ಲಿ ಈ ಮುಳ್ಳುಗಳು ತುಸು ದೊಡ್ಡವು. ಈ ಹಾವುಗಳು ಶಾಖ ಗ್ರಹಣಾಂಗಗಳಿಂದ ಸಜ್ಜಾಗಿವೆ. ಮೂಗಿನ ಸೊಳ್ಳೆಗಳ ಸಮೀಪ ಗುಳಿಗಳಿದ್ದು, ಇವು ಕುಳಿಮಂಡಲ ಹಾವುಗಳ ಕುಳಿಗಳ ರೀತಿಯಲ್ಲೇ ಶಾಖಗ್ರಹಣಾಂಗಗಳಾಗಿ ಕಾರ್ಯನಿರ್ವಹಿಸುತ್ತವೆ. ಭಾರತದಲ್ಲಿರುವ ಹೆಬ್ಬಾವಿನ ಮತ್ತೊಂದು ಪ್ರಭೇದ ರಾಜ ಹೆಬ್ಬಾವು (ಪೈಥಾನ್ ರೆಟಿಕುಲೇಟಸ್)10 ಮೀಟರ್‌ಗಳಿಗೂ ಹೆಚ್ಚು ಉದ್ದ ಬೆಳೆಯುತ್ತದೆ. ಇದು ಬಹುಶಃ ಪ್ರಪಂಚದಲ್ಲಿಯೇ ಬಹು ದೊಡ್ಡದಾದ ಸರ್ಪ. ನಿಕೋಬಾರ್ ದ್ವೀಪಗಳಲ್ಲಿ ಈ ರಾಜ ಹೆಬ್ಬಾವು ಜೀವಿಸುತ್ತದೆ.

**ವಿತರಣೆ :** ಬಹುತೇಕ ಭಾರತದಾದ್ಯಂತ ವಿತರಿಸಿರುವ ಹೆಬ್ಬಾವುಗಳು ಅಳಿವೆಕಾಡು, ಒಣ ಪೊದೆಯ ಕಾಡು ಮತ್ತು ಸಮುದ್ರ ಮಟ್ಟದಿಂದ 2000 ಮೀಟರುಗಳವರೆಗೆ ಎತ್ತರವಿರುವ ತಂಪಾದ, ದಟ್ಟವಾದ ಮಳೆಯ ಕಾಡುಗಳಲ್ಲಿ ಕಂಡುಬರುತ್ತವೆ.

**ಆವಾಸ :** ವಿವಿಧ ರೀತಿಯ ಪರಿಸರಗಳಿಗೆ ಹೊಂದಿಕೊಳ್ಳುವ ಶಕ್ತಿ ಹೆಬ್ಬಾವುಗಳಿಗಿದ್ದರೂ ಅವುಗಳಿಗೆ ಬೇಟೆಯಾಡಲು ಮತ್ತು ಅಡಗಿಕೊಳ್ಳಲು ವಿಶಾಲವಾದ ಪ್ರಶಾಂತ ಸ್ಥಳಗಳಿರಬೇಕು. ಅವು ಸಾಮಾನ್ಯವಾಗಿ ಸದಾ ನೀರು ದೊರೆಯುವ ಸ್ಥಳಗಳ ಸಮೀಪದ ಕಲ್ಲು ಪೊಟರೆಗಳು, ಗುಹೆಗಳು, ಸಸ್ತನಿಗಳು ಕೊರೆದ ಬಿಲಗಳು, ಮರದ ಪೊಳ್ಳುಗಳು, ದಟ್ಟವಾದ ಜೊಂಡು ಸಸ್ಯಗಳು ಹಾಗೂ ಮ್ಯಾನ್‌ಗ್ರೋವ್ ಮೆಳೆಗಳಲ್ಲಿ ವಾಸಿಸುತ್ತವೆ.

**ಸ್ವಭಾವಗಳು :** ಬೆಳಗಿನ ಹೊತ್ತು ಹೆಬ್ಬಾವುಗಳು ನಿದ್ದೆಮಾಡುತ್ತವೆ ಅಥವಾ ಬಿಸಿಲು ಕಾಯಿಸಿಕೊಳ್ಳುತ್ತಾ ವಿಶ್ರಾಂತಿ ಪಡೆಯುತ್ತವೆ. ರಾತ್ರಿಯ ಹೊತ್ತು ಅವು ಈಡು ಜೀವಿಗಳನ್ನು ಅರಸುತ್ತಾ ತಿರುಗಾಡುತ್ತವೆ ಅಥವಾ ನೀರುಗುಂಡಿ, ಹಳ್ಳ ಅಥವಾ



ಭಾರತದ ಶಿಲಾ ಹೆಬ್ಬಾವು

ಸಸ್ತನಿಗಳು ಸದಾ ಓಡಾಡುವಲ್ಲಿ ಹೊಂಚು ಹಾಕುತ್ತಾ ಕಾಯುತ್ತವೆ. ಅತಿ ದೊಡ್ಡ ಹೆಬ್ಬಾವುಗಳು ಹೆಚ್ಚು ತಿರುಗಾಡಲು ಹಿಂದೇಟು ಹಾಕುವಂತೆ ಕಾಣುತ್ತವೆ. ಆದರೆ ಅವು ಅನೇಕ ವೇಳೆ ತಮಗೆ ಇಷ್ಟವಾದ ವಾಸಸ್ಥಳಗಳನ್ನು ಮತ್ತು ಜೀವಿಸುವ ಪ್ರದೇಶದ ಎಲ್ಲೆಗಳನ್ನು ಸ್ಥಿರಪಡಿಸಿಕೊಳ್ಳುತ್ತವೆ. ಹೆಬ್ಬಾವುಗಳು ಭರ್ಜರಿ ಊಟಮಾಡಿದ ನಂತರ, ಸೋಮಾರಿಗಳಾಗುತ್ತವೆ ಮತ್ತು ಆಹಾರ ಪಚನವಾಗುವ ಕಾಲದಲ್ಲಿ ಅವು ಕೆಲವು ದಿನ ಅಥವಾ ಕೆಲವು ವಾರಗಳವರೆಗೂ ವಿಶ್ರಾಂತಿ ಪಡೆಯಬಹುದು. ಬಂಧನದಲ್ಲಿದ್ದ ಒಂದು ಹೆಬ್ಬಾವು ಎರಡು ವರ್ಷಗಳಿಗೂ ಹೆಚ್ಚು ಕಾಲ ಉಪವಾಸವಿತ್ತು. ನಾವು ಚೆನ್ನಾಗಿ ಆರೈಕೆ ಮಾಡಿದರೆ ಬಂಧನದಲ್ಲಿರುವ ಹೆಬ್ಬಾವುಗಳನ್ನು ಪಳಗಿಸಬಹುದು.

**ಸಂತಾನ :** ಮಾರ್ಚ್ ಮತ್ತು ಜೂನ್ ತಿಂಗಳುಗಳ ಮಧ್ಯೆ, ಸುರಕ್ಷಿತ ಹಾಗೂ ಪ್ರಶಾಂತವಾದ ಬಿಲ, ಗುಹೆ ಅಥವಾ ಪೊಟರೆಯಲ್ಲಿ ಹೆಣ್ಣುಹಾವು 100ರವರೆಗೆ ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಗಳು ಸಾಮಾನ್ಯವಾಗಿ ಬಾತುಕೋಳಿ ಮೊಟ್ಟೆಗಳ ಗಾತ್ರ (ಕೆಲವೊಮ್ಮೆ ಇನ್ನೂ ದೊಡ್ಡದಾಗಿರುತ್ತವೆ)ವಿರುತ್ತವೆ. ತಾಯಿ ಹೆಬ್ಬಾವು 60-80 ದಿನಗಳವರೆಗೆ ಮೊಟ್ಟೆಗಳನ್ನು ತನ್ನ ಶರೀರದಿಂದ ಸುತ್ತಿಕೊಂಡಿರುತ್ತದೆ. ಅದು ತನ್ನ ಶರೀರದ ಮಾಂಸಖಂಡಗಳನ್ನು ಲಯಬದ್ಧವಾಗಿ ಸಂಕುಚಿಸುತ್ತಾ ಮೊಟ್ಟೆಗಳಿಗೆ ರಕ್ಷಣೆ, ತೇವಾಂಶ ನಿಯಂತ್ರಣ ಮತ್ತು ಕಾವು ಕೊಡುತ್ತದೆ.

**ಆಹಾರ :** ಹೆಬ್ಬಾವುಗಳು ಮುಖ್ಯವಾಗಿ ಬಿಸಿರಕ್ತದ ಪ್ರಾಣಿಗಳನ್ನು ಬೇಟೆಯಾಡುತ್ತವೆ. ಈಡುಜೀವಿಗಳು ಇಲಿ ಮತ್ತು ಪಕ್ಷಿಗಳಿಂದ ಹಿಡಿದು ನರಿಗಳವರೆಗೆ ಹಾಗೂ ಕಾಡುಬೆಕ್ಕುಗಳಿಂದ ಹಿಡಿದು ಜಿಂಕೆ, ಕಾಡುಹಂದಿಗಳವರೆಗೂ ಇರಬಹುದು. ಹೆಬ್ಬಾವುಗಳು ಈಡುಜೀವಿಗಳಿಗೆ ಯಾವುದೇ ಸುಳಿವು ನೀಡದೆ ಹಿಂಬಾಲಿಸಿ, ಒಮ್ಮೆಲೇ ಮೇಲೆ ಬಿದ್ದು, ಆ ಪ್ರಾಣಿಯ ಸುತ್ತ ತಳುಕಿಕೊಳ್ಳುತ್ತವೆ. ಹೆಬ್ಬಾವುಗಳು ಈಡು ಜೀವಿಗಳನ್ನು ಹಿಸುಕಿ ಪುಡಿಮಾಡುವ ಬದಲು, ಅವುಗಳ ಹೃದಯ ಬಡಿತ ಮತ್ತು ಉಸಿರಾಟ ನಿಲ್ಲುವಂತೆ ಮಾಡುತ್ತವೆ. ಭಾರತದಲ್ಲಿ ಹೆಬ್ಬಾವು ಮನುಷ್ಯನನ್ನು ನುಂಗಿಹಾಕಿದ ಅಧಿಕೃತ ವರದಿ ಯಾವುದೂ ಇಲ್ಲ. ಸಾಮಾನ್ಯವಾಗಿ ತಾವಿರುವೆಡೆಯಲ್ಲಿ, ಕೃಷಿ ಪೀಡಕ ಪ್ರಾಣಿಗಳನ್ನು ಬೇಟೆಯಾಡುವ ಜೀವಿಗಳಲ್ಲಿ ಹೆಬ್ಬಾವುಗಳು ಅತ್ಯಂತ ಪ್ರಮುಖವಾದವು.

**ಪರಿಸ್ಥಿತಿ :** ಹೆಬ್ಬಾವುಗಳ ಸುಂದರ ಚರ್ಮಕ್ಕಾಗಿ, ಅವು ವಾಸಿಸುವ ಎಲ್ಲ ಪ್ರದೇಶಗಳಲ್ಲಿಯೂ ಇವುಗಳನ್ನು ಕೊಲ್ಲಲಾಗುತ್ತಿದೆ. ಆದ್ದರಿಂದ ಈ ಸುಂದರ ಸರ್ಪವು ಹಲವಾರು ಪ್ರದೇಶಗಳಲ್ಲಿ ಈಗ ನಾಶಕ್ಕೆ ಒಳಗಾಗಿದೆ. ಭಾರತ ಸರ್ಕಾರವು ಈಗ ಹೆಬ್ಬಾವುಗಳನ್ನು ಭಾಗಶಃ ರಕ್ಷಿಸಿದೆ ಮತ್ತು ಇವುಗಳ ಚರ್ಮದ ರಫ್ತನ್ನು ನಿಷೇಧಿಸಿದೆ. ಹೆಬ್ಬಾವಿನ ಮಾಂಸವನ್ನು ಕೇರಳ ಮತ್ತು ತಮಿಳುನಾಡಿನ ಪಾಲಿಯ ಮತ್ತು ಇತರೆ ಮೂಲ ನಿವಾಸಿಗಳು ತಿನ್ನುತ್ತಾರೆ. ಹಲವಾರು ಪ್ರದೇಶಗಳಲ್ಲಿ ಹೆಬ್ಬಾವಿನ ಕೊಬ್ಬಿಗೆ ಔಷಧದ ಗುಣವಿದೆಯೆಂಬ ನಂಬಿಕೆಯಿಂದ ಇದನ್ನು ಬಳಸುತ್ತಾರೆ.

# 4. ಸಾಮಾನ್ಯ ಮರಳ ಹೆಬ್ಬಾವು

*ಎರಿಕ್ಸ್ ಕಾನಿಕಸ್ (Eryx Conicus)*

**ವಿಶಿಷ್ಟ ಲಕ್ಷಣಗಳು** : ಗಿಡ್ಡದಾದ ದಪ್ಪ ಶರೀರ ; ಏಣುಗಳಿರುವ ಹುರುಪೆಗಳು ; ತುಂಬ ಒರಟಾದ ಬಾಲ. ಗಮನ ಸೆಳೆಯುವ ಮಚ್ಚೆಗಳ ಚಿತ್ತಾರ.

**ಸರಾಸರಿ ಉದ್ದ** : 50 ಸೆಂ. ಮೀ. ; ಹುಟ್ಟಿದಾಗ : 12.5 ಸೆಂ. ಮೀ. ; ಗರಿಷ್ಠ : 1ಮೀ. (ಹೆಣ್ಣು).

**ವಿವರಣೆ :** ಸಾಮಾನ್ಯ ಮರಳ ಹೆಬ್ಬಾವಿನ ಒಟ್ಟಾರೆ ಬಣ್ಣ ಹಳದಿ–ಬಿಳುಪಿನಿಂದ ಹಿಡಿದು ಕಡುಕಂದು ಬಣ್ಣದವರೆಗೆ ಇರುತ್ತದೆ. ಅಲ್ಲದೆ ಬೆನ್ನ ಮೇಲೆ ಕೆಂಪು–ಕಂದಿನಿಂದ ಹಿಡಿದು ಕಪ್ಪುಬಣ್ಣದವರೆಗೆ ವಿವಿಧ ಗಾತ್ರದ ಮಚ್ಚೆಗಳು, ಎರ್ರಾಬಿರ್ರಿಯಾಗಿ ಜೋಡಣೆಯಾಗಿವೆ. ಇವು ಅತಿ ಒರಟು ಬಾಲದ ಮತ್ತು ಚಚ್ಚೌಕನೆಯ ಮೂಗಿರುವ ಕೊಣಪ ಹಾವುಗಳು. ಮೇಲ್ನೋಟಕ್ಕೆ ಇವು ಉರಿಮಂಡಲ ಹಾವನ್ನು ಹೋಲುತ್ತವೆ. ಆದರೆ ಉರಿಮಂಡಲ ಹಾವಿನ ಮಚ್ಚೆಗಳು ದುಂಡಗೆ ಏಕರೂಪವಾಗಿರುತ್ತವೆ.

**ವಿತರಣೆ** : ಭಾರತದಾದ್ಯಂತ ಮೈದಾನ ಮತ್ತು ಬೆಟ್ಟಗುಡ್ಡಗಳಲ್ಲಿರುತ್ತದೆ. ಆದರೆ ಬಂಗಾಳ ಮತ್ತು ಅಸ್ಸಾಂನ ಬಹಳಷ್ಟು ಭಾಗಗಳಲ್ಲಿ ಇವು ಅಪರೂಪ ಅಥವಾ ಇರುವುದಿಲ್ಲ.

**ಆವಾಸ** : ಈ ಹಾವುಗಳಿಗೆ ಪ್ರಿಯವಾದ ಪ್ರದೇಶಗಳೆಂದರೆ ಮರಳು ಮಣ್ಣು, ಇಲಿ ಬಿಲಗಳು, ಇಟ್ಟಿಗೆ ಗೂಡುಗಳು ಮತ್ತು ಕಲ್ಲುಗಳಿರುವ ಪ್ರದೇಶಗಳು.

**ಸ್ವಭಾವ :** ಸಾಮಾನ್ಯ ಮರಳ ಹೆಬ್ಬಾವುಗಳು ಪ್ರಮುಖವಾಗಿ ನಿಶಾಚರಿಗಳು. ಕತ್ತಲಾದ ಮೇಲೆ ಇಲಿಗಳ ಹೊಸ ಬಿಲಗಳ ಹತ್ತಿರ ಹೋಗಿ ಬೇಟೆಯಾಡುತ್ತವೆ ಅಥವಾ ತಮ್ಮ ಬಿಲದಿಂದ ಕುತ್ತಿಗೆ ಮತ್ತು ತಲೆಯನ್ನು ಹೊರಚಾಚಿ ಸಮೀಪ ಸುಳಿದಾಡುವ ಇಲಿಗಳನ್ನು ಬೇಟೆಯಾಡಲು ಹೊಂಚುಹಾಕುತ್ತಿರುತ್ತವೆ. ಮುಂಜಾನೆಯ ವೇಳೆ, ಸೂರ್ಯೋದಯವಾದ ಕೆಲವು ಗಂಟೆಗಳಲ್ಲಿ ಪಕ್ಷಿ ಮತ್ತು ಹಲ್ಲಿಗಳನ್ನು ಹಿಡಿಯಲು ಈ ತಂತ್ರವನ್ನು ಯಶಸ್ವಿಯಾಗಿ ಬಳಸುವುದನ್ನು ನಾವು ನೋಡಿದ್ದೇವೆ. ಹಿಡಿದಾಗ ಮೊದಲಿಗೆ ಅಂಜುಬುರುಕನಂತೆ ಕಂಡರೂ, ಅನಂತರ ಮೃದುವಾದ ಹಿಡಿತಕ್ಕೆ ರೂಢಿಯಾಗುತ್ತದೆ. ಸುತ್ತಿಕೊಳ್ಳುವುದು ಮತ್ತು ತಕ್ಷಣ ಕಡಿಯುವುದು ಇದರ ಮೊದಲ ರಕ್ಷಣಾ ಕ್ರಮ. ಈ ಹಾವು ಕಚ್ಚಿದಾಗ ಸ್ವಲ್ಪ ನೋವುಂಟಾಗಬಹುದಾದರೂ ಇದರ ಕಡಿತ ಸಂಪೂರ್ಣವಾಗಿ ಅಪಾಯ ರಹಿತ. ಕೆಣಕಿದಾಗ ಸಾಮಾನ್ಯವಾಗಿ ಇವು ತಮ್ಮ ತಲೆಯನ್ನು ಶರೀರದ ಕೆಳಗೆ ಅಡಗಿಸಿಕೊಳ್ಳುತ್ತವೆ. ಕೆಂಪು ಮರಳ ಹೆಬ್ಬಾವಿನಷ್ಟು ಬಿಲ ಕೊರೆಯದಿದ್ದರೂ ಇವು ಸುಲಭವಾಗಿ ಬಿಲ ಕೊರೆಯಬಹುದಾದ ಮರಳು ಮಣ್ಣನ್ನು ಹೆಚ್ಚು ಇಷ್ಟಪಡುತ್ತವೆ.

**ಸಂತಾನ** : ಮೇ ನಿಂದ ಜೂನ್ ತಿಂಗಳುಗಳಲ್ಲಿ ಹೆಣ್ಣು ಹಾವುಗಳು 6 ರಿಂದ 8 ಮರಿಹಾವುಗಳಿಗೆ ಜನ್ಮ ನೀಡುತ್ತವೆ. ಮರಿ ಹಾವುಗಳು ತಂದೆ ತಾಯಿಗಳ ಹೋಲೆಯುವ



ಸಾಮಾನ್ಯ ಮರಳ ಹೆಬ್ಬಾವು

ಪಡಿಯಚ್ಚುಗಳಂತಿರುತ್ತವೆ ಮತ್ತು ಸ್ವಲ್ಪ ಮಟ್ಟಿಗೆ ಗರಗಸ ಹುರುಪೆಯ ಮಂಡಲ ಹಾವುಗಳನ್ನು ಹೋಲುತ್ತವೆ.

**ಆಹಾರ :** ಪ್ರೌಢವಾದ ಸಾಮಾನ್ಯ ಮರಳ ಹೆಬ್ಬಾವುಗಳು ಇಲಿಗಳನ್ನು ತಿನ್ನುತ್ತವೆ. ಆದರೆ ಮರಿ ಹಾವುಗಳು ಮೊದಲಿಗೆ ಕೀಟ, ಮೂಗಿಲಿ, ಸಣ್ಣ ಇಲಿ ಮತ್ತು ಹಾವುಗಳನ್ನು ತಿನ್ನುತ್ತವೆ. ಅನಂತರ ಪಕ್ಷಿ, ಹಲ್ಲಿ ಹಾಗೂ ಮೂಷಿಕಗಳನ್ನು ತಿನ್ನಲು ಪ್ರಾರಂಭಿಸುತ್ತವೆ. ಎಲ್ಲ ಮರಳ ಹಾವುಗಳು ಈಡುಪ್ರಾಣಿಯನ್ನು ಸುತ್ತಿಕೊಂಡು ಅವುಚಿ ಸಾಯಿಸುತ್ತವೆ.

**ಪರಿಸ್ಥಿತಿ :** ಸಾಮಾನ್ಯ ಮರಳ ಹೆಬ್ಬಾವುಗಳು ಸಮರ್ಥ ಮೂಷಿಕ ನಿಯಂತ್ರಕಗಳಾದರೂ ಅವನ್ನು ಚರ್ಮಕ್ಕಾಗಿ ತೀವ್ರ ಪ್ರಮಾಣದಲ್ಲಿ ಕೊಲ್ಲಲಾಗುತ್ತಿದೆ. ಚರ್ಮದ ವ್ಯಾಪಾರಿಗಳು ಈ ಹಾವುಗಳನ್ನು 'ಮರಿ ಹೆಬ್ಬಾವು'ಗಳೆಂದು ಕರೆಯುತ್ತಾರೆ.

**ಸೂಚನೆ :** ಮರಳ ಹೆಬ್ಬಾವಿನ ಕಡಿತ ಅಥವಾ ನೆಕ್ಕುವ ಕ್ರಿಯೆಯಿಂದ ಕುಷ್ಠರೋಗದಂತಹ ಚರ್ಮರೋಗವು ಬರುತ್ತದೆಂಬ ತಪ್ಪು ನಂಬಿಕೆಯು ಭಾರತದ ಹಲವಾರು ಪ್ರದೇಶಗಳಲ್ಲಿದೆ. ಕನ್ನಡದಲ್ಲಿ ಈ ಹಾವನ್ನು ಕೆಲವು ಕಡೆ ಕೊಳಕು ಮಂಡಲ ಹಾವೆಂದು ಕರೆಯುತ್ತಾರೆ. ಈ ಹಾವಿನ ಚರ್ಮದಲ್ಲಿರುವ ಮಚ್ಚೆಗಳ ಚಿತ್ತಾರವೇ ಈ ನಂಬಿಕೆ ಹುಟ್ಟಿರುವುದಕ್ಕೆ ಕಾರಣವಿರಬಹುದು.

*ನಿರುಪದ್ರವಿ*

## 5. ಕೆಂಪು ಮರಳ ಹೆಬ್ಬಾವು (ಮಣ್ಣುಮುಕ್ಕ)

*ಎರಿಕ್ಸ್ ಜಾನಿ (Eryx Johnii)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಶರೀರ ; ತುಂಬ ಮೊಂಡಾದ ಬಾಲ ಮತ್ತು ತಲೆ ; ಏಣುಗಳಿರುವ ಹುರುಪೆಗಳು ; ಬಣ್ಣದ ಚಿತ್ತಾರವಿಲ್ಲ.

**ಸರಾಸರಿ ಉದ್ದ:** 75 ಸೆಂ.ಮೀ.; ಹುಟ್ಟಿದಾಗ : 22 ಸೆಂ.ಮೀ. ; ಗರಿಷ್ಠ: 1 ಮೀ.

**ವಿವರಣೆ :** ಕೆಂಪು ಮರಳ ಹೆಬ್ಬಾವಿನ ಒಟ್ಟಾರೆ ಬಣ್ಣದಲ್ಲಿ ಕೆಂಪು-ಕಂದು ಹಾಗೂ ಬೂದು ಅಥವಾ ಹಳದಿ ಚುಕ್ಕೆಗಳಿಂದ ಹಿಡಿದು ಕಪ್ಪು ಬಣ್ಣದವರೆಗೆ ವ್ಯತ್ಯಾಸವಿರುತ್ತದೆ. ಈ ಹಾವುಗಳ ದಪ್ಪನಾದ ಶರೀರವು ಬಿಲ ಕೊರೆಯುವುದಕ್ಕೆ ಸೂಕ್ತವಾಗಿದೆ. ಅತ್ಯಂತ ವಿಚಿತ್ರವಾಗಿ ಕಾಣುವ ಭಾರತದ ಹಾವುಗಳಲ್ಲಿ ಕೆಂಪು ಮರಳ ಹೆಬ್ಬಾವೂ ಒಂದು. ಗುದ್ದಲಿಯಾಕಾರದ ಮೂಗು ಮತ್ತು ತುಂಡರಿಸಲಾಗಿದೆಯೇನೋ ಎನ್ನುವಷ್ಟು ಮೊಂಡಾಗಿರುವ ಬಾಲದಿಂದಾಗಿ ಈ ಹಾವನ್ನು ಸುಲಭವಾಗಿ ಗುರುತಿಸಬಹುದು. ಆದ್ದರಿಂದಲೇ ಈ ಹಾವುಗಳನ್ನು ಸ್ಥಳೀಯ ಭಾಷೆಯಲ್ಲಿ ಅನೇಕ ವೇಳೆ 'ಎರಡು ತಲೆ' ಹಾವುಗಳೆಂದು ಕರೆಯುತ್ತಾರೆ. ಹಾವಾಡಿಗರು ಇವನ್ನು ಸಾಮಾನ್ಯವಾಗಿ ಸಂಗ್ರಹಿಸುತ್ತಾರೆ.

**ವಿತರಣೆ :** ಭಾರತದ ಎಲ್ಲ ಶುಷ್ಕ ಪ್ರದೇಶಗಳಲ್ಲಿರುತ್ತದೆ. ಸಾಮಾನ್ಯವಾಗಿ ತಮಿಳುನಾಡು, ಆಂಧ್ರಪ್ರದೇಶ ಮತ್ತು ವಾಯವ್ಯ ಪ್ರದೇಶಗಳಲ್ಲಿ ಕಂಡುಬರುತ್ತದೆ. ಇದು ಮೈದಾನದ ಹಾವು.



ಕೆಂಪು ಮರಳ ಹೆಬ್ಬಾವು (ಮಣ್ಣುಮುಕ್ಕ)

**ಆವಾಸ :** ಈ ಹಾವು ಮರಳು ಪ್ರದೇಶಗಳನ್ನು ಇಷ್ಟಪಡುತ್ತದೆ ಮತ್ತು ಕೆಲವೊಮ್ಮೆ ಮೂಷಿಕ ಬಿಲಗಳಲ್ಲಿ ವಾಸಿಸಬಹುದು.

**ಸ್ವಭಾವಗಳು :** ಈ ಹಾವು ನಿಶಾಚರಿ. ಹಿಡಿದಾಗ ಸಾಮಾನ್ಯ ಮರಳ ಹೆಬ್ಬಾವುಗಳಂತೆ ಇವು ಕಚ್ಚುವುದಿಲ್ಲ. ಆಲಸಿಗಳು, ಸುಮ್ಮನೆ ತಮ್ಮ ತಲೆಯನ್ನು ಶರೀರದ ಸುರಳಿಗಳ ಕೆಳಗೆ ಅಡಗಿಸಿಕೊಳ್ಳಲು ಪ್ರಯತ್ನಿಸುತ್ತವೆ. ತಲೆಯನ್ನು ಹೀಗೆ ಸುರಕ್ಷಿತಗೊಳಿಸಿ, ಬಾಲವನ್ನು ಅತ್ತಿತ್ತ ವಾಲಾಡಿಸುತ್ತಾ ಪೀಡಕನ ಗಮನವನ್ನು ಬೇರೆಡೆಗೆ ಸೆಳೆಯಬಹುದು. ಈ ನಟನೆಯ ಪರಿಣಾಮವಾಗಿ ಹಾವಿನ ಬಾಲವು ಅನೇಕ ಗಾಯದ ಮತ್ತು ಏಟುಗಳಿಂದ ಕಚ್ಚು ಕಚ್ಚಾದ ಗುರುತುಗಳನ್ನು ಹೊಂದಿರುತ್ತದೆ.

**ಸಂತಾನ :** ಜೂನ್ ತಿಂಗಳ ಸುಮಾರಿಗೆ ಹೆಣ್ಣು ಹಾವು 6 ರಿಂದ 8 ಮರಿಗಳನ್ನು ಹಾಕುತ್ತದೆ. ಮರಿಹಾವುಗಳಿಗೆ ಸ್ಪಷ್ಟವಾದ ಪಟ್ಟೆಗಳಿರುತ್ತವೆ.

**ಆಹಾರ :** ಈ ಹಾವಿನ ಆಹಾರ ಪದ್ಧತಿ ಮತ್ತು ಈಡುಜೀವಿಯನ್ನು ಹಿಡಿದು ಕೊಲ್ಲುವ ರೀತಿಯು ಸಾಮಾನ್ಯ ಮರಳ ಹೆಬ್ಬಾವನ್ನು ಹೋಲುತ್ತದೆ. ಕೆಂಪು ಮರಳ ಹೆಬ್ಬಾವುಗಳು ಇತರೆ ಹಾವುಗಳನ್ನು ಆಗಾಗ್ಗೆ ತಿನ್ನುತ್ತಿರುತ್ತವೆ. ಭತ್ತ ಹಾಳುಮಾಡುವ ಕುಖ್ಯಾತ ಪ್ರಾಣಿಯಾದ ಮಖಮಲ್ ಹೆಗ್ಗಣದ ಮುಚ್ಚಿರುವ ಬಿಲಗಳಿಗೆ ನುಗ್ಗುವ ಕೆಲವೇ ಹಾವುಗಳಲ್ಲಿ ಇವೂ ಸೇರಿವೆ

**ಪರಿಸ್ಥಿತಿ :** ಅದೃಷ್ಟವಶಾತ್ ಕೆಂಪು ಮರಳ ಹೆಬ್ಬಾವುಗಳ ಹೆಸರು ಚರ್ಮಮಾರುವವರ ಪಟ್ಟಿಯಲ್ಲಿಲ್ಲ. ಅಲ್ಲದೆ ಭಾರತದಲ್ಲಿ ಮರಳುಗಾಡಿನ ಪ್ರದೇಶವೂ ಸದಾ ಹೆಚ್ಚುತ್ತಿರುವುದರಿಂದ ಈ ಹಾವುಗಳಿಗೆ ನಿಜವಾದ ಪ್ರೋತ್ಸಾಹ ದೊರೆತಂತಾಗಿದೆ.

*ನಿರುಪದ್ರವಿ*

# 6. ಸಾಮಾನ್ಯ ತೋಳದ ಹಾವು

*ಲೈಕೊಡಾನ್ ಆಲಿಕಸ್ (Lycodon aulicus)*

**ವಿಶಿಷ್ಟ ಲಕ್ಷಣಗಳು :** ಹೊಳೆಯುವ ಅಡ್ಡಪಟ್ಟೆಗಳಿರುವ ಅಥವಾ ಇಲ್ಲದಿರುವ ಚಿಕ್ಕ, ತೆಳುವಾದ ಶರೀರ, ನುಣುಪಾದ ಹೊಳೆಯುವ ಹುರುಪೆಗಳು, ಹೊರಚಾಚಿರುವ ಕಪ್ಪು ಕಣ್ಣುಗಳು.

**ಸರಾಸರಿ ಉದ್ದ :** 30 ಸೆಂ.ಮೀ. ; ಹುಟ್ಟಿದಾಗ: 14 ಸೆಂ.ಮೀ. ; ಗರಿಷ್ಠ: 80 ಸೆಂ.ಮೀ.

**ವಿವರಣೆ :** ಸಾಮಾನ್ಯ ತೋಳದ ಹಾವುಗಳು ಬೂದು, ಕಂದು ಅಥವಾ ಕಪ್ಪು ಬಣ್ಣವಿದ್ದು, 10 ರಿಂದ 12 ತೆಳು ಬಿಳುಪಿನ ಅಥವಾ ಹಳದಿಯ ಪಟ್ಟೆಗಳನ್ನು ಹೊಂದಿರುತ್ತವೆ. ಇವುಗಳ ಕಡುಕಪ್ಪು ವರ್ಣದ ಕಣ್ಣುಗಳು ಸ್ವಲ್ಪ ಹೊರಚಾಚಿರುತ್ತವೆ. ಕಣ್ಣುಗಳ ಪಾಪೆಯು ಅಗೋಚರ – ಪುಟ್ಟ ಹಾವುಗಳಿಗೆ ಅರೆಪಾರದರ್ಶಕ ಚರ್ಮವಿದ್ದು, ಅವುಗಳ ಕೆಳಭಾಗದಿಂದ ಒಳಗಿನ ಅಂಗಾಂಗಗಳನ್ನು ಸುಲಭವಾಗಿ ನೋಡಬಹುದು. ಸ್ವಲ್ಪ ಚೂಪಾದ ಹಾಗೂ ಚಪ್ಪಟೆಯಾದ ತಲೆ, ನುಣುಪಾದ ಹಾಗೂ ಸುಮಾರಾಗಿ



ಸಾಮಾನ್ಯ ತೋಳದ ಹಾವು

ಹೊಳೆಯುವ ಹುರುಪೆಗಳಿರುತ್ತವೆ. ತಳಭಾಗವು ಯಾವುದೇ ಗುರುತುಗಳಿಲ್ಲದೆ ಬಿಳಿ ಬಣ್ಣವಿರುತ್ತದೆ. ಅವು ಹೊಳಪಿನ, ಚಿಕ್ಕ ಹಾಗೂ ಕೆಲವು ವೇಳೆ ಮನುಷ್ಯ ಜೀವಿಸುವ ಸ್ಥಳಗಳಲ್ಲಿಯೇ ಕಂಡುಬರುವ 'ಮನೆ' ಹಾವುಗಳು. ಭಾರತದಲ್ಲಿನ ತೋಳದ ಹಾವುಗಳಲ್ಲಿ 8 ಪ್ರಭೇದಗಳಿವೆ.

**ವಿತರಣೆ :** ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳೂ ಸೇರಿದಂತೆ ಭಾರತ ದಾದ್ಯಂತ ಬೆಟ್ಟಗಳಲ್ಲಿ 2,000 ಮೀಟರ್ ಎತ್ತರದವರೆಗೂ ಇರುತ್ತವೆ.

**ಸ್ವಭಾವಗಳು :** ಸಾಮಾನ್ಯ ತೋಳದ ಹಾವುಗಳು ಕಟ್ಟಾ ನಿಶಾಚರಿಗಳು. ಬೆಳಗಿನ ವೇಳೆ ಯಾವಾಗಲೂ ಕಾಣಸಿಗುವುದಿಲ್ಲ. ಇವು ನುಣುಪಾದ ಗೋಡೆ ಮತ್ತು ಮರದ ಕಾಂಡಗಳನ್ನು ಸುಲಭವಾಗಿ ಹತ್ತುತ್ತವೆ. ಹಿಡಿದಾಗ ಮೊದಲಿಗೆ ಅಲ್ಪ ಸಿಟ್ಟಿನಿಂದ ಕಚ್ಚುತ್ತವೆ. ಇವುಗಳ ಬಾಯಿಯ ಮುಂದಿರುವ ಉದ್ದನೆಯ ಹಲ್ಲುಗಳಿಂದಲೇ ಇವುಗಳಿಗೆ ತೋಳದ ಹಾವುಗಳು ಎಂಬ ಹೆಸರು ಬಂದಿದೆ. ಸೂಕ್ಷ್ಮವಾಗಿ ಗಮನಿಸದಿದ್ದಲ್ಲಿ ಈ ಹಲ್ಲುಗಳನ್ನು ವಿಷದಂತಗಳೆಂದು ತಪ್ಪಾಗಿ ತಿಳಿಯುವ ಸಾಧ್ಯತೆಯಿದೆ.

**ಸಂತಾನ :** ಈ ಹಾವುಗಳು ಚೆನ್ನೈ ಪ್ರದೇಶದಲ್ಲಿ ಡಿಸೆಂಬರ್-ಜನವರಿ ತಿಂಗಳುಗಳಲ್ಲಿ 5 ರಿಂದ 7 ಮೊಟ್ಟೆಗಳನ್ನಿಡುತ್ತವೆ. ಮರಿ ಹಾವುಗಳು, ಪ್ರೌಢ ಹಾವುಗಳಿಗಿಂತ ಗಾಢವಾದ ಹಾಗೂ ಪ್ರಕಾಶಮಾನವಾದ ಬಣ್ಣಗಳ ಚಿತ್ತಾರ ಹೊಂದಿರುತ್ತವೆ.

**ಆಹಾರ :** ಇವು ಚಿಕ್ಕ ಹಲ್ಲಿ ಮತ್ತು ಕಪ್ಪೆಗಳನ್ನು ತಿನ್ನುತ್ತವಾದರೂ ಪ್ರೌಢ ಹಾವುಗಳು ಹಾವುರಾಣಿ ಮತ್ತು ಹಲ್ಲಿಗಳನ್ನು ಇಷ್ಟಪಡುತ್ತವೆ. ಹಾವುಗಳ ಉದ್ದವಾದ ಮುಂದಿನ ಹಲ್ಲುಗಳು, ಈಡುಜೀವಿಯನ್ನು ಭದ್ರವಾಗಿ ಹಿಡಿದು ಜೀವಂತವಾಗಿ ನುಂಗಲು ಸಹಾಯ ಮಾಡುತ್ತವೆ.

**ಪರಿಸ್ಥಿತಿ :** ತೋಳದ ಹಾವುಗಳನ್ನು ಅನೇಕ ವೇಳೆ 'ಕಡಂಬಳ'ಗಳೆಂದು ತಪ್ಪಾಗಿ ತಿಳಿದು ಕೊಲ್ಲುತ್ತಾರೆ. ಈ ಹಾವುಗಳು ಅಲ್ಲಲ್ಲಿ ಕಂಡು ಬಂದರೂ ಯಾವ ಪ್ರದೇಶದಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಬಹುತೇಕ ಕಾಲೇಜು ಮತ್ತು ಶಾಲೆಗಳ ಸಂಗ್ರಹಾಲಯಗಳಿಗೆ ಬೇಕಾದ ಪ್ರಾಣಿಗಳ ಪಟ್ಟಿಯಲ್ಲಿ ಈ ಹಾವುಗಳ ಹೆಸರಿರುವುದು ವಿಷಾದಕರ.

*ನಿರುಪದ್ರವಿ*

# 7. ಪಟ್ಟೆ ಕುಕ್ರಿ

*ಒಲಿಗೊಡಾನ್ ಆರ್ನೆನ್ಸಿಸ್ (Oligodon arnensis)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದಾದ ಶರೀರ; ನುಣುಪಾದ ಹೊಳೆಯುವ ಹುರುಪೆಗಳು; ಪ್ರಮುಖವಾದ ಅಡ್ಡಪಟ್ಟಿಗಳು ಮತ್ತು ತಲೆಯ ಮೇಲೆ ಬಾಣದಾಕಾರದ ವಿಶಿಷ್ಟ ಗುರುತು.



ಪಟ್ಟೆ ಕುಕ್ರಿ

**ಸರಾಸರಿ ಉದ್ದ :** 35 ಸೆಂ.ಮಿ. ; ಹುಟ್ಟಿದಾಗ : 8 ಸೆಂ.ಮಿ. ; ಗರಿಷ್ಠ : 64 ಸೆಂ.ಮಿ.
**ವಿವರಣೆ :** ಪಟ್ಟೆ ಕುಕ್ರಿ ಸರ್ಪಗಳು ಕೆಂಪು ಅಥವಾ ಬೂದು ಬಣ್ಣ ಮಿಶ್ರಿತ ಕಂದು ಬಣ್ಣವಿದ್ದು 10 ರಿಂದ 20 ಕಪ್ಪು ಅಥವಾ ಗಾಢವಾದ ಕಂದು ಬಣ್ಣದ ಪಟ್ಟೆಗಳನ್ನು ಪಡೆದಿವೆ. ತಲೆಯ ಮೇಲೆ ಸ್ಪಷ್ಟವಾದ ಬಾಣದ ತುದಿಯ ಗುರುತಿದೆ. ಶರೀರದ ತಳಭಾಗ ಬೆಳ್ಳಗಿರುತ್ತದೆ. ನುಣುಪಾದ ಹೊಳೆಯುವ ಹುರುಪೆಗಳು, ಮೊಂಡು ತುದಿಯ ತೆಳುವಾದ ತಲೆ ಹಾಗೂ ದುಂಡನೆಯ ಪಾಪೆಯಿರುವ ಕಣ್ಣುಗಳು, ಈ ಹಾವುಗಳ ವಿಶಿಷ್ಟ ಲಕ್ಷಣಗಳು. ಈ ಹಾವುಗಳಿಗೆ ಚೂಪಾದ ಹಾಗೂ ಬಾಗಿರುವ ಹಲ್ಲುಗಳಿರುವುದರಿಂದ ಕುಕ್ರಿ (ಘೂರ್ಕಗಳು ಸೊಂಟದಲ್ಲಿಟ್ಟುಕೊಳ್ಳುವ ಬಾಗಿದ ಕುಡುಗತ್ತಿ) ಹಾವುಗಳೆಂಬ ಹೆಸರು ಬಂದಿದೆ. ಈ ಹಲ್ಲುಗಳು ಹಲ್ಲಿಗಳಂತಹ ಬಲಿಷ್ಠವಾದ ಈಡುಜೀವಿಗಳನ್ನು ಭದ್ರವಾಗಿ ಹಿಡಿಯಲು ಸಮರ್ಪಕವಾಗಿವೆ. ಏಷ್ಯಾದಲ್ಲಿರುವ 34 ಪ್ರಭೇದಗಳ ಕುಕ್ರಿ ಹಾವುಗಳಲ್ಲಿ ಪಟ್ಟೆ ಕುಕ್ರಿಹಾವು ಅತ್ಯಂತ ಹೆಚ್ಚು ಕಂಡುಬರುವ ಹಾವು. ಕುಕ್ರಿ ಹಾವುಗಳ ವಾಸಸ್ಥಾನವು ದಕ್ಷಿಣ ಏಷ್ಯದಿಂದ ದಕ್ಷಿಣ ಚೀನದವರೆಗೆ ಹಾಗೂ ಮಲೇಷಿಯದ ಕೆಲವು ದ್ವೀಪಗಳವರೆಗೆ ವಿಸ್ತರಿಸುತ್ತದೆ. ಪಟ್ಟೆ ಕುಕ್ರಿಯಂತೆ ಮತ್ತೊಂದು ಸಾಮಾನ್ಯ ಪ್ರಭೇದವೆಂದರೆ ರಸೆಲ್ಸ್‌ಕುಕ್ರಿ ಹಾವು. ಇದರ ಮೈಬಣ್ಣ ಮತ್ತು ಪಟ್ಟೆಗಳ ವಿನ್ಯಾಸ ಪಟ್ಟೆ ಕುಕ್ರಿಗಿಂತ ಭಿನ್ನವಾಗಿದ್ದರೂ ತಲೆಯ ಮೇಲೆ ಕುಕ್ರಿಗಳಿಗಿರುವಂತೆಯೇ ಬಾಣದ ಗುರುತಿದೆ.
**ವಿತರಣೆ :** ಭಾರತಾದ್ಯಂತ. ಅಸ್ಸಾಂ ರಾಜ್ಯದ ಬಿಳಿಪಟ್ಟೆಯ ಕುಕ್ರಿ ಹಾವು ಬೆಟ್ಟಗಳಲ್ಲಿ 2000 ಮೀಟರುಗಳ ಎತ್ತರದವರೆಗೂ ಕಂಡುಬರುತ್ತದೆ.
**ಆವಾಸ :** ಕೆಲವೊಮ್ಮೆ ಹುತ್ತಗಳಲ್ಲಿ ಕಂಡುಬಂದರೂ, ಪಟ್ಟೆ ಕುಕ್ರಿಗಳು, ತೋಳ ಹಾಗೂ ಬೆಕ್ಕು ಹಾವುಗಳಂತೆ, ಮುಖ್ಯವಾಗಿ ಗುಹೆ, ಕೊರಕಲು ಮತ್ತು ಮರದ ಪೊಟರೆಗಳಲ್ಲಿ ಜೀವಿಸುತ್ತವೆ. ಇವುಗಳಿಗೆ ಪಾಳುಬಿದ್ದ ಮನೆಗಳು ಯೋಗ್ಯ ವಾಸಸ್ಥಳಗಳು.
**ಸ್ವಭಾವ:** ಮಳೆಗಾಲದ ತಂಪು ರಾತ್ರಿಗಳಲ್ಲಿ ಚಟುವಟಿಕೆಯಿಂದಿರುತ್ತವೆ ಮತ್ತು ಹೊರ ಸಂಚಾರಕ್ಕೆ ಬರುತ್ತವೆ. ಬಹುತೇಕ ಇವು ಕಚ್ಚುವುದೇ ಇಲ್ಲ. ಕೆಣಕಿದಾಗ ಕಡಂಬಳ ಹಾವುಗಳಂತೆ ಶರೀರವನ್ನು ಸೆಟೆದು ವಾಲಾಡಿಸುವುದೇ ಇವುಗಳ ಮುಖ್ಯ ರಕ್ಷಣಾಕ್ರಮ.
**ಸಂತಾನ :** ಪಟ್ಟೆ ಕುಕ್ರಿಗಳು ಸಾಮಾನ್ಯವಾಗಿ 3 ರಿಂದ 6 ಮೊಟ್ಟೆಗಳನ್ನಿಡುತ್ತವೆ. ಚೆನ್ನೈನಲ್ಲಿ ಮರಿಕುಕ್ರಿಗಳು ಸೆಪ್ಟೆಂಬರ್ ತಿಂಗಳಲ್ಲಿ ಕಂಡುಬರುತ್ತವೆ.
**ಆಹಾರ :** ಹಲ್ಲಿ, ಹಾವುರಾಣಿ ಹಾಗೂ ಸಣ್ಣ ಇಲಿಗಳು. ಎಂ. ಎ. ಸ್ಮಿತ್ ಪ್ರಕಾರ ಈ ಹಾವುಗಳಿಗೆ ಪಕ್ಷಿ ಮತ್ತು ಸರೀಸೃಪಗಳ ಮೊಟ್ಟೆಗಳೆಂದರೆ ವಿಶೇಷವಾದ ಮೋಹ. ಮರಿಕುಕ್ರಿಗಳು, ಕೀಟ ಅವುಗಳ ಲಾರ್ವ ಹಾಗೂ ಜೇಡಗಳನ್ನು ತಿನ್ನುತ್ತವೆ.
**ಪರಿಸ್ಥಿತಿ :** ಹೆಚ್ಚಿನ ಸಂಖ್ಯೆಯಲ್ಲಿಲ್ಲದಿರುವುದರಿಂದ ತುಂಬ ಅಪರೂಪವಾಗಿ ಕಂಡುಬಂದರೂ ಈ ಹಾವುಗಳು ಸಾಮಾನ್ಯವಾಗಿ ಎಲ್ಲ ಕಡೆ ಇರುತ್ತವೆ. ಪಟ್ಟೆಗಳ ನಮೂನೆಯಿಂದಾಗಿ ಇವನ್ನು ಕೆಲವೊಮ್ಮೆ ಕಡಂಬಳ ಹಾವುಗಳೆಂದು ತಪ್ಪಾಗಿ ತಿಳಿದುಕೊಳ್ಳಲಾಗುತ್ತಿದೆ.

ನಿರುಪದ್ರವಿ

# 8. ಪಟ್ಟೆ ಬೆನ್ನೇಣು ಹಾವು

*ಆಂಫಿಯೆಸ್ಮ ಸ್ಟೊಲಾಟ (Amphiesma Stolata)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದಾದ ಶರೀರ ; ಏಣೆರುವ(ಒರಟಾದ) ಹುರುಪೆಗಳು ; ಬೆನ್ನ ಮೇಲೆ ಉದ್ದನೆಯ ಎರಡು ವಿಶಿಷ್ಟವಾದ ಹಳದಿ ಪಟ್ಟೆಗಳು.

**ಸರಾಸರಿ ಉದ್ದ :** 40 ಸೆಂ.ಮೀ. ; ಹುಟ್ಟಿದಾಗ : 9 ಸೆಂ.ಮೀ. ; ಗರಿಷ್ಠ: 80 ಸೆಂ.ಮೀ. (ಹೆಣ್ಣು).

**ವಿವರಣೆ :** ಪಟ್ಟೆ ಬೆನ್ನೇಣು ಹಾವುಗಳು ನೀರುಹಾವುಗಳನ್ನು ಹೋಲುತ್ತವೆ ಮತ್ತು ಅವುಗಳ ಸಮೀಪ ಸಂಬಂಧಿಗಳೂ ಹೌದು. ಇವು ನೀರಿನಲ್ಲಿ ಋಷಿಯಾಗಿರಬಲ್ಲವು. ಈ ಹಾವುಗಳಿಗೆ ಬಾಯಿಯ ಹಿಂಭಾಗದಲ್ಲಿ ಉದ್ದವಾದ ಹಲ್ಲುಗಳಿದ್ದು, ಅವು ಕಪ್ಪೆಗಳನ್ನು ಹಿಡಿಯಲು ಸಹಾಯಕ. ಶರೀರದ ಒಟ್ಟಾರೆ ಬಣ್ಣ ತಿಳಿ ಅಥವಾ ದಟ್ಟವಾದ ಕಂದು; ಶರೀರದ ಉದ್ದಕ್ಕೂ ಚರ್ಮ ಅಥವಾ ಹಳದಿ ಬಣ್ಣದ ಎರಡು ಪಟ್ಟೆಗಳಿವೆ. ಶರೀರದ ಕೊನೆಯ ಅರ್ಧ ಭಾಗದಲ್ಲಿ ಈ ಪಟ್ಟೆಗಳು ಹೆಚ್ಚು ಹೊಳೆಯುತ್ತಿರುತ್ತವೆ. ತಲೆಯ ಬಣ್ಣ ತಿಳಿಯಾದ ಕಂದು ; ತಲೆಯ ಎರಡೂ ಪಾರ್ಶ್ವಗಳು, ತುಟಿಯ ಭಾಗ ಮತ್ತು ಕೆನ್ನೆಯ ಭಾಗವು ಬಿಳಿ ಅಥವಾ ಹಳದಿಯಿರುತ್ತದೆ. ಈ ಹಾವಿಗಿಂತ ಸ್ವಲ್ಪ ಭಿನ್ನವಾದ ಹಾಗೂ ಚಿಕ್ಕದಾದ ಸರ್ಪವೊಂದು ಚೆನ್ನೈ ಪ್ರದೇಶದಲ್ಲಿದೆ. ಅದಕ್ಕೆ ಪ್ರತಿ ಕಣ್ಣಿನ ಹಿಂದೆ ಅಗಲವಾದ ಕಪ್ಪುಬಣ್ಣದ ರೇಖೆಗಳಿರುತ್ತವೆ. ಇದು ಭಾರತದ ಸಾಮಾನ್ಯ 'ಹುಲ್ಲು ಹಾವು'.

**ಆವಾಸ :** ಈ ಹಾವುಗಳು ಭತ್ತದ ಗದ್ದೆ, ಕೊಳದ ಅಂಚು, ದಟ್ಟವಾದ ಹುಲ್ಲುಗಾವಲು ಮತ್ತು ಪೊದೆಗಳಲ್ಲಿ ಜೀವಿಸಲು ಇಷ್ಟಪಡುತ್ತವೆ.

**ಸ್ವಭಾವ :** ಬೆಳಗಿನ ವೇಳೆ ಚಟುವಟಿಕೆಯಿಂದಿರುವ ಈ ಹಾವುಗಳು ರಾತ್ರಿ ವೇಳೆಯನ್ನು ಕಲ್ಲು ಬಂಡೆಗಳ ಕೆಳಗೆ, ಬಿಲಗಳಲ್ಲಿ ಅಥವಾ ಪೊದೆಗಳಲ್ಲಿ ಅಥವಾ ಮರದ ರೆಂಬೆಗಳಲ್ಲಿ ನಿದ್ರೆ ಮಾಡುತ್ತ ಕಳೆಯುತ್ತವೆ. ಬೆದೆಯ ಕಾಲದಲ್ಲಿ ಹೆಣ್ಣಿನ ಜೊತೆ ಆರು ಅಥವಾ ಹೆಚ್ಚಿನ ಸಂಖ್ಯೆಯ ಚಿಕ್ಕ ಗಂಡು ಹಾವುಗಳು ಕಂಡುಬರಬಹುದು. ಸೌಮ್ಯವಾದ ಹಾವುಗಳಲ್ಲೊಂದಾದ ಈ ಹಾವು ಹಿಡಿದಾಗಲೂ ಕಡಿಯುವುದು ತುಂಬ ಅಪರೂಪ. ಆದ್ದರಿಂದ ಇದು ಹವ್ಯಾಸಿ ಸರೀಸೃಪ ತಜ್ಞರಿಗೆ ಹೇಳಿ ಮಾಡಿಸಿದಂತಹ ಹಾವು. ಹೆದರಿಸಿದಾಗ ಇವುಗಳಲ್ಲಿ ಕೆಲವು 'ಹೆಡೆ'ಯನ್ನು ಬಿಚ್ಚಿ ಆಕರ್ಷಕವಾದ ನೀಲಿ, ಕೆಂಪು ಅಥವಾ ಬಿಳಿಯ ಹುರುಪೆಯ ನಡುವಿನ ಬಣ್ಣವನ್ನು ಪ್ರದರ್ಶಿಸುತ್ತವೆ.

**ಸಂತಾನ :** ಚೆನ್ನೈನ ಸರ್ಪವನದಲ್ಲಿ ಒಂದು ಹೆಣ್ಣು ಹಾವು 12 ಮೊಟ್ಟೆಗಳನ್ನಿಟ್ಟಿತ್ತು. ವರ್ಷದ ಎಲ್ಲ ಕಾಲಗಳಲ್ಲಿಯೂ ಈ ಹಾವುಗಳು ಮೊಟ್ಟೆಗಳನ್ನಿಡುವುದನ್ನು ನಾವು ನೋಡಿದ್ದೇವೆ.

**ಆಹಾರ :** ಕಪ್ಪೆಗಳೇ ಮುಖ್ಯ ಆಹಾರ. ಬೇಟೆಯನ್ನು ಜೀವಂತವಾಗಿ ನುಂಗುವ ಈ ಹಾವುಗಳು ನೆಲಗಪ್ಪೆ, ಚಿಕ್ಕ ಹಲ್ಲಿ ಮತ್ತು ಇಲಿಗಳನ್ನೂ ತಿನ್ನುತ್ತವೆ. ಮರಿಹಾವುಗಳು



ಪಟ್ಟೆ ಬೆನ್ನೇಣು ಹಾವು

ಕೀಟ, ಗೊದಮೊಟ್ಟೆ, ನೆಲಗಪ್ಪೆ ಮರಿಗಳು ಮತ್ತು ಚಿಕ್ಕ ಬಾಯಿರುವ ಕಪ್ಪೆಗಳನ್ನು ತಿನ್ನುತ್ತವೆ.

**ಪರಿಸ್ಥಿತಿ :** ಅತಿ ಸಾಮಾನ್ಯವಾದುದು.

**ಸೂಚನೆಗಳು :** ತೋಟಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಪಟ್ಟೆ ಬೆನ್ನೇಣು ಹಾವುಗಳನ್ನು ಅನೇಕ ವೇಳೆ 'ನಾಗರಹಾವಿನ ಮರಿ'ಗಳೆಂದು ತಪ್ಪಾಗಿ ತೋಟಗಾರರು ಮತ್ತು ಮನೆಯವರು ಇವನ್ನು ವಿನಾಕಾರಣ ಕೊಲ್ಲುತ್ತಾರೆ.

*ನಿರುಪದ್ರವಿ*

# 9. ಹಸಿರು ಬೆನ್ನೇಣು ಹಾವು

*ಮಾಕ್ರೊ ಪಿಸ್ತೊಡಾನ್ ಪ್ಲಂಬಿಕಲರ್*

*(Macropisthodon plumbicolor)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಶರೀರ ; ಏಣಿರುವ ಹುರುಪೆಗಳು ; ಹುಲ್ಲಿನ ಹಸಿರು ಬಣ್ಣ ; ಕೆಣಕಿದಾಗ ಕುತ್ತಿಗೆಯನ್ನು ಚಪ್ಪಟೆ ಮಾಡಿ ಸ್ಪಷ್ಟವಾದ 'V' ಗುರುತಿರುವ 'ಹೆಡೆ' ತೋರಿಸುತ್ತವೆ.

**ಸರಾಸರಿ ಉದ್ದ :** 55 ಸೆಂ.ಮೀ. ; ಹುಟ್ಟಿದಾಗ : 7.5 ಸೆಂ.ಮೀ. ; ಗರಿಷ್ಟ : 80 ಸೆಂ.ಮೀ.

**ವಿವರಣೆ :** ಹಸಿರು ಬೆನ್ನೇಣು ಹಾವಿನ ಬಣ್ಣ ಹೊಳೆಯುವ ಹಸಿರು. ಶರೀರದ ಮೇಲೆ ಮಸುಕಾದ ಮತ್ತು ಅನುಕ್ರಮವಿಲ್ಲದ ಕಪ್ಪು ಬಣ್ಣದ ಅಡ್ಡಪಟ್ಟೆಗಳಿವೆ. ಸುಮಾರಾಗಿ ಸ್ಪಷ್ಟವಾದ ಹಾಗೂ ತಲೆಕೆಳಗಾದ 'V' ಆಕಾರದ ಗುರುತು ತಲೆ ಮತ್ತು ಕುತ್ತಿಗೆಯ ಮೇಲಿದೆ. ಹಾವನ್ನು ಕೆಣಕಿದಾಗ ಈ ಗುರುತು 'ಹೆಡೆ'ಯ ಆಕಾರವಾಗುತ್ತದೆ. ಹಾವಿನ ಚರ್ಮವು ಸುಮಾರಾದ ಹೊಳಪನ್ನು ಹಾಗೂ ಕಡಿದಾದ ಏಣುಗಳನ್ನು ಹೊಂದಿದೆ. ಅಗಲವಾದ ತಲೆ ಮತ್ತು ದುಂಡನೆಯ ಪಾಪೆಗಳಿರುವ ದೊಡ್ಡ ಕಣ್ಣುಗಳಿವೆ. ಶರೀರದ ತಳಭಾಗ ಬೂದುಮಿಶ್ರಿತ ಬಿಳಿಬಣ್ಣವಿರುತ್ತದೆ. ಮರಿ ಹಾವುಗಳಲ್ಲಿ ಪ್ರಕಾಶಮಾನವಾದ ಚಿತ್ತಾರವಿರುತ್ತದೆ (ಸಂತಾನ ನೋಡಿ).

**ವಿತರಣೆ:** ಭಾರತದ ಕಾಡುಗಳು; ಸಮುದ್ರ ಮಟ್ಟದಿಂದ 1500 ಮೀಟರ್ ಎತ್ತರದವರೆಗೆ.

**ಆವಾಸ:** ಹಸಿರು ಬೆನ್ನೇಣು ಹಾವುಗಳು ಪ್ರಮುಖವಾಗಿ ಬೆಟ್ಟಗುಡ್ಡ ಮತ್ತು ಮೈದಾನ ಪ್ರದೇಶಗಳಲ್ಲಿ ದಟ್ಟವಾದ ಹಸಿರೆಲೆ ಕಾಡುಗಳಲ್ಲಿ ಮತ್ತು ಬಯಲು ಪ್ರದೇಶದ ಉದುರೆಲೆ ಕಾಡುಗಳಲ್ಲಿ ಕಂಡುಬರುತ್ತದೆ.

**ಸ್ವಭಾವ :** ಈ ಹಾವಿನ ಬಗ್ಗೆ ನಮಗೆ ಗೊತ್ತಿರುವುದು ತುಂಬ ಕಡಿಮೆ. ಭಯವಾದಾಗ, ಇತರೆ ಕೆಲವು ಹಾವುಗಳಂತೆ ಇದೂ ಸಹ ತನ್ನ ಶರೀರವನ್ನು 'S' ಆಕಾರದಲ್ಲಿ

ತಿರುಚಿಕೊಂಡು ಸ್ತಬ್ಧವಾಗುತ್ತದೆ. ಕೆಣಕಿದಾಗ ಇವು ಸುಮಾರು ಗಾತ್ರದ 'ಹೆಡೆ'ಯನ್ನು ಬಿಚ್ಚಿ ಎತ್ತಿ ಹಿಡಿಯುತ್ತವೆ. ಎಂ. ಎ. ಸ್ಮಿತ್ ಸೂಚಿಸುವಂತೆ 'ಸಾಕಿದಾಗ ಈ ಹಾವು ಅತ್ಯಂತ ಸೌಮ್ಯಜೀವಿ ಮತ್ತು ಆಕ್ರಮಣಕಾರಿಯಲ್ಲ'.

**ಸಂತಾನ :** ಹೆಣ್ಣು ಹಾವು ಸುಮಾರು 12 ಮೊಟ್ಟೆಗಳನ್ನಿಡುತ್ತದೆ. 8 ತಿಂಗಳು ಅಥವಾ ಒಂದು ವರ್ಷದವರೆಗೆ ಮರಿಹಾವುಗಳ ಶರೀರ ಹೊಳೆಯುವ ಬಣ್ಣಗಳನ್ನು ಹೊಂದಿದ್ದು, ಕಪ್ಪುಪಟ್ಟೆಗಳನ್ನು ಮತ್ತು ಮಚ್ಚೆ ಮಚ್ಚೆಯಿರುವ ಗುರುತುಗಳನ್ನು ಹೊಂದಿರುತ್ತದೆ. ಕುತ್ತಿಗೆಯಲ್ಲಿನ ಗುರುತುಗಳು ಪ್ರಧಾನವಾಗಿರುತ್ತವೆ.

**ಆಹಾರ :** ಹಸಿರು ಬೆನ್ನೇಣು ಹಾವುಗಳು ಬೇರೆಲ್ಲ ಈಡುಜೀವಿಗಳಿಗಿಂತ ನೆಲಕಪ್ಪೆಗಳನ್ನು ಹೆಚ್ಚು ಇಷ್ಟಪಡುತ್ತವೆ. ಈ ಹಾವುಗಳಿಗೆ ನೆಲಗಪ್ಪೆಗಳನ್ನು ಸಮರ್ಪಕವಾಗಿ ಹಿಡಿಯಲು ಬಾಯಿಯಂಗಳದ ಹಿಂಭಾಗದಲ್ಲಿ ಉದ್ದವಾದ ಹಲ್ಲುಗಳಿವೆ.

**ಪರಿಸ್ಥಿತಿ :** ಇದು ಕಡಿಮೆ ದಟ್ಟಣೆಯಿರುವ ಆದರೆ ಬಹಳಷ್ಟು ಪ್ರದೇಶಗಳಲ್ಲಿ ಕಂಡು ಬರುವ ಹಾವು. ಈ ಹಾವುಗಳು ಜೀವಿಸಲು ಇಷ್ಟಪಡುವ ಅರಣ್ಯಗಳು ತೀವ್ರವಾಗಿ ಕಣ್ಮರೆಯಾಗುತ್ತಿವೆ.

*ನಿರುಪದ್ರವಿ*

## 10. ಚೌಕಳಿ ಬೆನ್ನೇಣು ನೀರುಹಾವು

*ಜೆನೋಕ್ರೋಪಿಸ್ ಪಿಸ್ಕೇಟರ್ (Xenochropis piscator)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಶರೀರ ; ಏಣುಗಳಿರುವ ಹೊಳೆಯುವ ಹುರುಪೆಗಳು ; ಕಣ್ಣಿನ ಮುಂಭಾಗದಲ್ಲಿ ಪ್ರಮುಖವಾದ ಕಪ್ಪು ರೇಖೆಗಳು ಮತ್ತು ಶರೀರದ ಮೇಲೆ ವಿಶಿಷ್ಟವಾದ ಚೌಕಳಿಯಾಕಾರದ ನಮೂನೆ.

**ಸರಾಸರಿ ಉದ್ದ :** 60 ಸೆಂ.ಮೀ. ; ಹುಟ್ಟಿದಾಗ : 12.5 ಸೆಂ.ಮೀ. ; ಗರಿಷ್ಠ : 1.75 ಮೀ. (ಹೆಣ್ಣು).

**ವಿವರಣೆ :** ಚೌಕಳಿ ಬೆನ್ನೇಣು ನೀರುಹಾವಿನ ಬಣ್ಣದಲ್ಲಿ ಲಘುವಾದ ಗುರುತುಗಳಿರುವ ಕಪ್ಪುಬಣ್ಣದಿಂದ ಹಿಡಿದು ಕಪ್ಪು ಹಾಗೂ ಬಿಳಿಬಣ್ಣದ ಚೌಕಳಿಗಳ ನಮೂನೆಗಳಿರುವ ಹೊಳೆಯುವ ಹಳದಿ ಬಣ್ಣದವರೆಗೆ ವ್ಯತ್ಯಾಸವಿರುತ್ತದೆ. ಎದ್ದುಕಾಣುವಂತಹ ಕಪ್ಪುಬಣ್ಣದ ಒಂದು ಅಥವಾ ಎರಡು ಕಣ್ಣಿನ ರೇಖೆಗಳು ಹಾಗೂ ಅಗಲವಾದ ತುದಿಯಿರುವ ತಲೆ ಈ ಹಾವಿನ ವಿಶಿಷ್ಟ ಲಕ್ಷಣಗಳು. ಹುರುಪೆಗಳಿಗೆ ಕಡಿದಾದ ಏಣುಗಳಿವೆ. ಒಟ್ಟಾರೆ ದಪ್ಪನಾದ ಶರೀರವಿರುವ ಈ ಹಾವು ಮಿರಿಮಿರಿ ಮಿಂಚುತ್ತದೆ. ಶರೀರದ ತಳಭಾಗ ಸಾಮಾನ್ಯವಾಗಿ ಹೊಳೆವ ಶುದ್ಧ ಬಿಳಿಪು. ಇದು ಭಾರತದ ಸಾಮಾನ್ಯ ನೀರು ಹಾವು. ಸಮೃದ್ಧಿಯಾಗಿರುವ ಈ ಹಾವುಗಳು ಸಿಹಿ ನೀರಿನ ತಾಣಗಳ ಸಮೀಪದ ಸ್ಥಳಗಳಲ್ಲಿ ಸುಮಾರಾಗಿ ಎಲ್ಲೆಡೆ ಕಂಡುಬರುತ್ತವೆ.



ಚೌಕಳಿ ಬೆನ್ನೇಣು ನೀರುಹಾವು

**ವಿತರಣೆ :** ಭಾರತದಲ್ಲಿ ಎಲ್ಲ ಸ್ಥಳಗಳಲ್ಲಿ. ಸಾಮಾನ್ಯವಾಗಿ ಎತ್ತರವಾದ ಬೆಟ್ಟಗಳಲ್ಲಿನ ನದಿಗಳಲ್ಲಿ, ಘಟ್ಟ ಹಾಗೂ ಹಿಮಾಲಯ ಪರ್ವತಗಳಲ್ಲಿ, ದಟ್ಟವಾದ ಬಣ್ಣಗಳಿರುವ ಈ ಹಾವುಗಳು ಕಂಡುಬರುತ್ತವೆ. ಆದರೆ ಹವ್ಯಾಸ ಹಾಗೂ ನೋಟದಲ್ಲಿ ಎಲ್ಲ ಹಾವುಗಳೂ ಒಂದೇ ರೀತಿಯಲ್ಲಿರುತ್ತವೆ. ಹಿಮಾಲಯ ಪರ್ವತಗಳಲ್ಲಿ 3000 ಮೀಟರ್‌ಗಳ ಎತ್ತರದವರೆಗೂ ಈ ಹಾವುಗಳು ಕಂಡುಬರುತ್ತವೆ.

**ಆವಾಸ :** ಸರೋವರ, ಕೊಳ, ಬಾವಿ, ನದಿ, ಝರಿ ಮತ್ತು ನೀರು ತುಂಬಿರುವ ಭತ್ತದ ಗದ್ದೆಗಳು.

**ಸ್ವಭಾವ :** ಹಗಲು–ರಾತ್ರಿ ಎರಡೂ ಹೊತ್ತುಗಳಲ್ಲಿಯೂ ಚೌಕಗಳಿರುವ ನೀರುಹಾವುಗಳು ಚಟುವಟಿಕೆಗಳಿಂದಿರುತ್ತವೆ. ಕೊಳ ಮತ್ತು ಭತ್ತದ ಗದ್ದೆಗಳ ಅಂಚುಗಳಲ್ಲಿ ಬೇಟೆಯಾಡುವ ಈ ಹಾವುಗಳು, ರಾತ್ರಿಯಲ್ಲಿ ಬಹಳ ಹೊತ್ತನ್ನು ನೆಲದ ಮೇಲೆ ಕಳೆಯುತ್ತವೆ. ಕೆರಳಿದಾಗ ಈ ಹಾವು ತಲೆಯನ್ನು ಚಪ್ಪಟೆಮಾಡಿ, ಕುತ್ತಿಗೆಯ ಪಕ್ಕೆಲುಬುಗಳನ್ನು ಹಿಗ್ಗಿಸಿ ತಲೆಯನ್ನು ಮೇಲಕ್ಕೆತ್ತುತ್ತದೆ. ಈ ಸ್ವಭಾವದಿಂದಾಗಿ ಈ ಹಾವುಗಳನ್ನು ನಾಗರಹಾವುಗಳೆಂದು ತಪ್ಪಾಗಿ ತಿಳಿಯುತ್ತಾರೆ. ಇವನ್ನು ಹಿಡಿದಾಗ ಅಥವಾ ತುಳಿದಾಗ ತಕ್ಷಣ ಕಚ್ಚುತ್ತವೆ. ಆದರೆ ಚೆನ್ನಾಗಿ ಆರೈಕೆ ಮಾಡಿದರೆ ಬಹುಬೇಗ ಪಳಗುತ್ತವೆ.

**ಸಂತಾನ :** ಇಲಿಯ ಬಿಲ, ಹುತ್ತ, ಬಾವಿ, ಗೋಡೆ ಅಥವಾ ಕೆರೆ ಏರಿಯ ರಂಧ್ರಗಳಲ್ಲಿ ಹೆಣ್ಣು ಹಾವು ಸಾಮಾನ್ಯವಾಗಿ 20 ರಿಂದ 40 ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಗಳು 60 ರಿಂದ 70 ದಿನಗಳ ನಂತರ ಒಡೆದು ಮರಿಗಳು ಹೊರಬರುತ್ತವೆ. ಅದುವರೆಗೂ ತಾಯಿಹಾವು ಮೊಟ್ಟೆಗಳಿಗೆ ಕಾವು ಕೊಡುತ್ತದೆ ಅಥವಾ ಮೊಟ್ಟೆಗಳಿಗೆ ರಕ್ಷಣೆ ನೀಡುತ್ತದೆ. ಚೆನ್ನೈನಲ್ಲಿ ಮೊಟ್ಟೆಗಳನ್ನು ಡಿಸೆಂಬರ್–ಫೆಬ್ರವರಿ ತಿಂಗಳುಗಳಲ್ಲಿ ಇಡಲಾಗುತ್ತದೆ. ಆದರೆ ಉತ್ತರ ಭಾರತದಲ್ಲಿ ಮೊಟ್ಟೆಯಿಡುವ ಕಾಲ ಮಾರ್ಚ್ ತಿಂಗಳ ಹಿಂದೆಮುಂದೆ ಇದ್ದಂತೆ ಕಾಣುತ್ತದೆ.

**ಆಹಾರ :** ನೀರು ಹಾವಿನ ಮರಿಗಳು ಗೊದಮೊಟ್ಟೆಗಳನ್ನು ಮತ್ತು ಜಲಕೀಟಗಳನ್ನು ತಿನ್ನುತ್ತವೆ. ಆ ಮರಿಗಳು ಬೆಳೆದಂತೆ ಮೀನು, ಕಪ್ಪೆಗಳನ್ನು ಹಾಗೂ ಅಪರೂಪಕ್ಕೆ ದಂಶಕ ಮತ್ತು ಪಕ್ಷಿಗಳನ್ನು ತಿನ್ನುತ್ತವೆ. ಸಾಮಾನ್ಯವಾಗಿ ಇವು ಈಡು ಪ್ರಾಣಿಗಳನ್ನು ಜೀವಂತ ನುಂಗುತ್ತವೆ. ಹಾವಿನ ಮೇಲ್ದವಡೆಯ ಹಿಂಭಾಗದಲ್ಲಿರುವ ಉದ್ದನೆಯ 'ಕಪ್ಪೆ ಹಲ್ಲುಗಳು' ಕಪ್ಪೆಗಳನ್ನು ಹಿಡಿಯಲು ಮತ್ತು ಚುಚ್ಚಿ ಗಾಯಮಾಡಲು ಸಹಾಯಕ.

**ಪರಿಸ್ಥಿತಿ :** ಈ ನೀರುಹಾವಿನ ಚರ್ಮಕ್ಕೆ ಬೇಡಿಕೆ ಹೆಚ್ಚು. ಸಾಮಾನ್ಯವಾಗಿ ಕಂಡುಬರುವ ಹಾವಾದರೂ ವರ್ಷದ ಎಲ್ಲ ಋತುಗಳಲ್ಲಿ ಈ ಹಾವನ್ನು ಸಂಗ್ರಹಿಸುವುದರಿಂದ ಕೆಲವು ಸ್ಥಳಗಳಲ್ಲಿ ಇವು ಪೂರ್ಣವಾಗಿ ನಶಿಸಿ ಹೋಗಿರುವುದನ್ನು ನಾವು ನೋಡಿದ್ದೇವೆ.

# 11. ಆಲಿವ್ ಬೆನ್ನೇಣು ನೀರುಹಾವು

*ಎಟ್ರಿಟಿಯಮ್ ಶಿಸ್ಟೋಸಮ್ (Atretium Schistosum)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದರಿಂದ ಮಧ್ಯಮ ಗಾತ್ರ ; ಏಣೆರುವ ಹೊಳೆಯುವ ಹುರುಪೆಗಳು ; ಶರೀರದ ಮೇಲ್ಭಾಗ ಆಲಿವ್ ಹಸಿರು ಬಣ್ಣ ; ತಳಭಾಗ ಹಳದಿ ಬಣ್ಣ.
**ಸರಾಸರಿ ಉದ್ದ :** 45 ಸೆಂ.ಮೀ. ; ಹುಟ್ಟಿದಾಗ: 10 ಸೆಂ.ಮೀ. ; ಗರಿಷ್ಠ: 1 ಮೀ.
**ವಿವರಣೆ :** ಆಲಿವ್ ನೀರುಹಾವಿಗೆ ತೆಳುವಾದ ತಲೆಯಿದೆ. ಹಾವಿನ ಒಟ್ಟಾರೆ ಬಣ್ಣ ದಟ್ಟವಾದ ಆಲಿವ್ ಹಸಿರು. ಕೆಲವೊಮ್ಮೆ ಶರೀರದ ಎರಡೂ ಅಂಚುಗಳಲ್ಲಿ ಕೆಂಪು ರೇಖೆಯಿರುತ್ತದೆ. ಶರೀರದ ತಳಭಾಗವು ಹಳದಿ ಅಥವಾ ಕಿತ್ತಳೆ ಬಣ್ಣ ಹೊಂದಿರುತ್ತದೆ. ಗಂಡುಹಾವಿಗಿಂತ ಹೆಣ್ಣುಹಾವು ದೊಡ್ಡದು. ಈ ಹಾವು ನೀರಿನಲ್ಲಿ ವಾಸಿಸುವ ಮತ್ತೊಂದು ಸಾಮಾನ್ಯ ನೀರುಹಾವು – 'ಎನ್‌ಹೈಡ್ರಿಸ್' ಅನ್ನು ಹೋಲುತ್ತದೆ. ಆದರೆ ನುಣುಪು ಶರೀರದ 'ಎನ್‌ಹೈಡ್ರಿಸ್' ನೀರುಹಾವು ನದಿ ಹಾಗೂ ಅಳಿವೆಗಳ ಕೊರಕಲುಗಳಲ್ಲಿ ಜೀವಿಸಲು ಇಷ್ಟಪಡುತ್ತದೆ. 'ಎನ್‌ಹೈಡ್ರಿಸ್' ಹಾವುಗಳು ಕೇರಳ, ಒರಿಸ್ಸ ಮತ್ತು ಪಶ್ಚಿಮ ಬಂಗಾಳದಲ್ಲಿ ಹೇರಳವಾಗಿವೆ.
**ವಿತರಣೆ :** ಭಾರತ ಪರ್ಯಾಯದ್ವೀಪದ ಭಾಗದಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಉತ್ತರ ಭಾರತದಲ್ಲಿ ಈ ಹಾವು ಕಂಡುಬರುವುದಿಲ್ಲ. ಸಮುದ್ರ ಮಟ್ಟದಿಂದ 1000 ಮೀಟರ್‌ವರೆಗೂ ಎತ್ತರವಿರುವ ಪ್ರದೇಶಗಳಲ್ಲಿರುತ್ತದೆ.
**ಆವಾಸ :** ಕೊಳ ಮತ್ತು ಕೆರೆಗಳಂತಹ ನಿಂತ ನೀರಿರುವ ಪ್ರದೇಶಗಳಲ್ಲಿ ಕಂಡುಬರುವ ಏಡಿ ಹಾಗೂ ಇತರೆ ಜೀವಿಗಳ ಬಿಲಗಳಲ್ಲಿ ಈ ಹಾವು ಜೀವಿಸುತ್ತದೆ.
**ಸ್ವಭಾವಗಳು :** ಈ ಹಾವು ಹಗಲಿನ ವೇಳೆ ಚಟುವಟಿಕೆಯಿಂದಿರುವ ಪ್ರಾಣಿಯಂತೆ ಕಂಡರೂ ರಾತ್ರಿಯ ವೇಳೆಯೂ ಸಂಚರಿಸುವುದನ್ನು ಜನ ನೋಡಿದ್ದಾರೆ. ಆಲಿವ್ ಬೆನ್ನೇಣು ಹಾವುಗಳು ಕಡಿಯುವುದು ಅಪರೂಪ.
**ಸಂತಾನ :** ಡಿಸೆಂಬರ್‌ನಿಂದ ಮಾರ್ಚ್‌ನೊಳಗೆ ಹೆಣ್ಣು ಹಾವು 12 ರಿಂದ 30 ಮೊಟ್ಟೆಗಳನ್ನಿಡುತ್ತದೆ.
**ಆಹಾರ :** ಈ ಹಾವುಗಳು ವಿಶಿಷ್ಟವಾದ ಪಾರ್ಶ್ವ ಹೊಡೆತದಿಂದ ಗೊದಮೊಟ್ಟೆ, ಮೀನು ಮತ್ತು ಕಪ್ಪೆಗಳನ್ನು ಹಿಡಿಯುತ್ತವೆ. ಪಾರ್ಶ್ವ ಹೊಡೆತವು ಸಮುದ್ರ ಹಾಗೂ ಸಿಹಿನೀರಿನ ಬಹಳಷ್ಟು ಹಾವುಗಳ ಪಾರ್ಶ್ವ ಹೊಡೆತವನ್ನು ಹೋಲುತ್ತದೆ. ಈಡುಜೀವಿಗಿಂತ ವೇಗವಾಗಿ ಈಜುವ ಈ ಹಾವು ಈಡುಜೀವಿಯ ತಲೆಯನ್ನು ಬದಿಯಿಂದ ಶೀಘ್ರವಾಗಿ ಹಿಡಿಯುತ್ತದೆ. ಆಲಿವ್ ಬೆನ್ನೇಣು ಹಾವುಗಳು ಸೊಳ್ಳೆಯ ಲಾರ್ವಗಳನ್ನು ಹಿಡಿದು ತಿನ್ನುವುದನ್ನು ನಾವು ನೋಡಿದ್ದೇವೆ. ಡಿಡಿಟಿ ಬಳಕೆಯ ಅಪಾಯ ಹಾಗೂ ಮಲೇರಿಯಾ ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ ಹಾವಿನ ಈ ಗುಣವನ್ನು ಅಧ್ಯಯನ ಮಾಡುವ ಅಗತ್ಯವಿದೆ.



ಆಲಿವ್ ಬೆನ್ನೇಣು ನೀರುಹಾವು

**ಪರಿಸ್ಥಿತಿ :** 'ನೀರನಾಗರ'ವೆಂದು ಕರೆದರೂ ಪರಿಸರಕ್ಕೆ ತಕ್ಕಂಥ ಬಣ್ಣ ಹೊಂದಿ ಕಣ್ಣಿಗೆ ಮರೆಮಾಚುವ ಈ ಸಣ್ಣ ಹಾವಿನ ಬಗ್ಗೆ ಜನ ತಾಳ್ಮೆಯಿಂದಿದ್ದಾರೆ. ಆದ್ದರಿಂದ ಈ ಹಾವು ಸಾಕಷ್ಟು ಸಾಮಾನ್ಯವಾಗಿ ಕಂಡುಬರುತ್ತದೆ.

*ನಿರುಪದ್ರವಿ*

# 12. ಟ್ರಿಂಕೆಟ್ (ಕೀಳೊಡವೆ) ಹಾವು

*ಇಲಾಫೆ ಹೆಲೆನ (Elaphe helena)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರ ; ತೆಳುವಾದ ಶರೀರ ; ನುಣುಪಾದ ಹೊಳೆಯುವ ಹುರುಪೆಗಳು, ದಟ್ಟ ಬಣ್ಣದ ಬಾಲ.
ಸರಾಸರಿ ಉದ್ದ : 70 ಸೆಂ.ಮೀ. ; ಹುಟ್ಟಿದಾಗ : 25 ಸೆಂ.ಮೀ. ; ಗರಿಷ್ಠ : 1.5 ಮೀ.

**ವಿವರಣೆ :** ಟ್ರಿಂಕೆಟ್ ಹಾವಿನ ಶರೀರವು ಹದಮಾಡಿದ ಚರ್ಮ ಅಥವಾ ಚಾಕಲೇಟ್ ಕಂದು ಬಣ್ಣವಿದ್ದು, ಶರೀರದ ಮುಂಭಾಗದಲ್ಲಿ ಲಘುವಾದ ಪಟ್ಟೆಗಳು ಹಾಗೂ ಚೌಕಳಿಗಳಿವೆ ; ಹಿಂಭಾಗದಲ್ಲಿ ದಟ್ಟವರ್ಣದ ಎರಡು ಪ್ರಮುಖ ಪಟ್ಟೆಗಳಿವೆ. ಉದ್ದವಾದ ತಲೆಯ ಮೇಲೆ ಯಾವ ಗುರುತೂ ಇಲ್ಲ. ಕಣ್ಣುಗಳು ಎದ್ದು ಕಾಣುವಂತಿದ್ದು ದುಂಡನೆಯ ಪಾಪೆ ಹೊಂದಿವೆ. ಕುತ್ತಿಗೆಯ ಎರಡೂ ಪಕ್ಕ ಚಿಕ್ಕದಾದ ಕಪ್ಪು ವರ್ಣರೇಖೆಗಳಿದ್ದು ಅವು ಮಧ್ಯಭಾಗದಲ್ಲಿ ಕೂಡಿಕೊಂಡು ತಲೆಕೆಳಗಾದ 'V' ಗುರುತನ್ನು ರಚಿಸಬಹುದು. ಶರೀರದ ತಳಭಾಗವು ಮುತ್ತಿನ ಹರಳಂತೆ ಬಿಳುಪಾಗಿರುತ್ತದೆ. ಹುರುಪೆಗಳು ನಯವಾಗಿ ಹೊಳೆಯುತ್ತವೆ. ಕಣ್ಣಿನ ಮುಂಭಾಗದಲ್ಲಿರುವ ಹುರುಪೆಗಳ ನಡುವೆ ಅಲ್ಲಲ್ಲಿ ರಂಧ್ರಗಳಿದ್ದು, ಅವು ಸಂವೇದನಾಂಗಗಳಿರಬಹುದು. ಭಾರತದಲ್ಲಿ ಟ್ರಿಂಕೆಟ್ ಹಾವುಗಳ 9 ಪ್ರಭೇದಗಳಿವೆ. ಬೆಟ್ಟ ಹಾಗೂ ಮೈದಾನ ಪ್ರದೇಶದಲ್ಲಿ ತಂಪು ವಾತಾವರಣವಿದ್ದಾಗ ಕಂಡುಬರುವ ಸೌಮ್ಯ ಸ್ವಭಾವದ ಹಾವು ಈ ಪ್ರಭೇದಗಳಲ್ಲಿ ಮಾದರಿಯಾದುದು.

**ವಿತರಣೆ :** ಭಾರತದ ಎಲ್ಲ ಪ್ರದೇಶಗಳಲ್ಲಿ ಹಸಿರು ಟ್ರಿಂಕೆಟ್ ಹಾವು ಅಂಡಮಾನ್ ದ್ವೀಪಗಳಲ್ಲಿ ಕಂಡುಬರುತ್ತದೆ. ಮಂಡರಿನ್ ಟ್ರಿಂಕೆಟ್ ಹಾವು ಹಿಮಾಲಯ ಪರ್ವತಗಳಲ್ಲಿ 4000 ಮೀಟರುಗಳ ಎತ್ತರದವರೆಗೂ ಕಂಡುಬರುತ್ತದೆ.

**ಆವಾಸ :** ಟ್ರಿಂಕೆಟ್ ಹಾವುಗಳು ಬೇಸಗೆ ಕಾಲದಲ್ಲಿ ಹುತ್ತ, ಕಲ್ಲುಗುಡ್ಡೆ ಮತ್ತು ಕೊರಕಲುಗಳ ಆಳವಾದ ಭಾಗದಲ್ಲಿ ವಾಸಿಸುತ್ತವೆ. ಚಳಿಗಾದಲ್ಲಿ ಅವು ಹೊರಬಂದು ಪೊದೆ ಮತ್ತು ಮರಗಳಲ್ಲಿ ಜೀವಿಸುತ್ತವೆ.

**ಸ್ವಭಾವ :** ಟ್ರಿಂಕೆಟ್ ಹಾವುಗಳು ಹಗಲು-ರಾತ್ರಿ ಎರಡು ವೇಳೆಯಲ್ಲಿಯೂ ಚಟುವಟಿಕೆಯಿಂದಿರುತ್ತವೆ. ಹಿಡಿದಾಗ ಸಾಮಾನ್ಯವಾಗಿ ಇವು ಸುಮ್ಮನಿರುತ್ತವೆ. ಆದರೆ ಕೆಲವು ತಮ್ಮ ಕುತ್ತಿಗೆಯನ್ನು ಹಿಗ್ಗಿಸಿ ಬಾಯ್ತೆರೆದು, ಶರೀರ ಮೇಲಕ್ಕೆತ್ತಿ, ಆಕ್ರಮಣ



ಟ್ರಂಕೆಟ್ (ಕೀಳೊಡವೆ) ಹಾವು

ಮಾಡಿದ ಜೀವಿಯ ಮೇಲೆ ಎರಗುವುದೂ ಉಂಟು. ಕೆಲವೊಮ್ಮೆ ರಕ್ಷಣಾ ಕ್ರಮವಾಗಿ ತಮ್ಮ ಬಾಲವನ್ನು ಒಂದೇ ಸಮನೆ ಅಲುಗಾಡಿಸುತ್ತವೆ. ಈ ಕ್ರಿಯೆಯು ಅಮೆರಿಕಾದ ರ್‍ಯಾಟಲ್(ಬುಡುಬುಡಿಕೆ) ಸರ್ಪಗಳ ಇಂತಹುದೇ ವಿಶಿಷ್ಟ ಪ್ರವೃತ್ತಿಯನ್ನು ನೆನಪಿಸುತ್ತದೆ.

**ಸಂತಾನ :** ಹೆಣ್ಣು ಹಾವು 6 ರಿಂದ 8 ಉದ್ದವಾದ ಮೊಟ್ಟೆಗಳನ್ನಿಡುತ್ತದೆ. ಮರಿಗಳು ವಯಸ್ಕ ಹಾವುಗಳನ್ನು ಹೋಲುತ್ತವೆ. ವರ್ಷದ ಎಲ್ಲ ಕಾಲಗಳಲ್ಲಿಯೂ ಸಂತಾನಾಭಿವೃದ್ಧಿ ನಡೆಯುವಂತೆ ಕಾಣುತ್ತದೆ. ಚೆನ್ನೈ ಸರ್ಪವನದಲ್ಲಿದ್ದ ಒಂದು ಹಾವು ಫೆಬ್ರವರಿ 14 ರಂದು 8 ಮೊಟ್ಟೆಗಳನ್ನಿಟ್ಟಿತ್ತು. ಅವು ಒಡೆದು ಏಪ್ರಿಲ್ 11 ರಂದು ಮರಿಗಳು ಹೊರಬಂದವು. ಮತ್ತೊಂದು ಹಾವು ಡಿಸೆಂಬರ್ ಮಧ್ಯಭಾಗದಲ್ಲಿ ಮೊಟ್ಟೆಗಳನ್ನು ಹಾಕಿತು. ಮಗದೊಂದು ಹಾವು ಆಗಸ್ಟ್ ಕೊನೆಯಲ್ಲಿ ಮೊಟ್ಟೆಗಳನ್ನು ಹಾಕಿತು.

**ಆಹಾರ :** ಅಮೆರಿಕಾದ ಪ್ರಸಿದ್ಧವಾದ ಕೇರೆಹಾವಿನಂತೆ ವಯಸ್ಕ ಟ್ರಿಂಕೆಟ್ ಹಾವು ಪ್ರಮುಖವಾಗಿ ದಂಶಕಗಳನ್ನು ತಿನ್ನುತ್ತದೆ. ಈ ಹಾವು ಈಡುಜೀವಿಯನ್ನು ಹಿಸುಕಿ ಕೊಲ್ಲುತ್ತದೆ. ಅಪರೂಪಕ್ಕೆ ಪಕ್ಷಿಗಳನ್ನು ಮತ್ತು ಅವುಗಳ ಮೊಟ್ಟೆಗಳನ್ನೂ ತಿನ್ನುವುದುಂಟು. ಮರಿಹಾವುಗಳು ಕೀಟ ಹಾಗೂ ಸಣ್ಣ ಹಲ್ಲಿಗಳನ್ನು ತಿನ್ನುತ್ತವೆ.

**ಪರಿಸ್ಥಿತಿ :** ಎಲ್ಲಿಯೂ ಟ್ರಿಂಕೆಟ್ ಹಾವುಗಳು ಸಾಮಾನ್ಯವಾಗಿ ಕಂಡುಬರುವ ಹಾವುಗಳಲ್ಲ. ಅವು ಅರಣ್ಯ ಹಾಗೂ ಕೃಷಿ ಕ್ಷೇತ್ರಗಳನ್ನು ಸಮನಾಗಿ ಇಷ್ಟಪಡುತ್ತವೆ. ಆದ್ದರಿಂದ ಕೃಷಿಭೂಮಿ ತೀವ್ರವಾಗಿ ಹೆಚ್ಚಿರುವುದು ಅವುಗಳ ಮೇಲೆ ಯಾವ ಪರಿಣಾಮವನ್ನೂ ಬೀರಿಲ್ಲ. ಇವು ರೂಪದಲ್ಲಿ ಸುಂದರ ಹಾಗೂ ಗಾತ್ರದಲ್ಲಿ ದೊಡ್ಡವಾಗಿದ್ದರೂ, ಚರ್ಮ ವ್ಯಾಪಾರದಲ್ಲಿ ಬೇಡಿಕೆ ಬರುವಷ್ಟು ಹೇರಳ ಸಂಖ್ಯೆಯಲ್ಲಿಲ್ಲ.

**ಸೂಚನೆಗಳು :** ವಿಷಯುಕ್ತ ಹಾವುಗಳೆಂದು ತಪ್ಪಾಗಿ ಭಾವಿಸಲಾಗಿದೆ. ಇರುಳರಂತಹ ಹಾವು ಹಿಡಿಯುವ ಜನರೂ ಸಹ ಇವನ್ನು ವಿಷಯುಕ್ತ ಹಾವುಗಳೆಂದು ನಂಬಿದ್ದಾರೆ.

*ನಿರುಪದ್ರವಿ*

# 13. ಕೇರೆ ಹಾವು

*ಟ್ಯೆಯಾಸ್ ಮ್ಯುಕೋಸಸ್ (Ptyas mucosus)*

**ವಿಶಿಷ್ಟ ಲಕ್ಷಣಗಳು :** ಮಿನಾಕೃತಿಯ ದೊಡ್ಡದಾದ ಶರೀರ, ಹೊಳೆಯುವ ಹುರುಪೆಗಳು, ಹಿಂಭಾಗದ ಹುರುಪೆಗಳಿಗೆ ಏಣುಗಳಿವೆ ; ತೆಳುವಾದ ಕುತ್ತಿಗೆ ಮತ್ತು ದೊಡ್ಡದಾದ ಕಣ್ಣುಗಳು.

**ಸರಾಸರಿ ಉದ್ದ :** 2 ಮಿ. ; ಹುಟ್ಟಿದಾಗ : 32 ಸೆಂ.ಮಿ. ; ಗರಿಷ್ಠ : 3.5 ಮಿ. (ಗಂಡುಹಾವು).

**ವಿವರಣೆ** : ಮೈಬಣ್ಣದಲ್ಲಿ ವಿಭಿನ್ನತೆಯಿರುವ ಹಾಗೂ ವಿಶಾಲವಾಗಿ ವಿತರಣೆಗೊಂಡಿರುವ ಸಾಮಾನ್ಯ ಹಾವು ಇದು. ಕೇರೆ ಹಾವುಗಳ ಶರೀರವು ತಿಳಿಹಳದಿ(ಬಯಲು ಪ್ರದೇಶಗಳಲ್ಲಿ)ಯಿಂದ ಹಿಡಿದು ಕಡುಕಪ್ಪು (ಬೆಟ್ಟಗಳಲ್ಲಿರುವ ಹಾವುಗಳು) ಬಣ್ಣವಿರಬಹುದು. ಅಲ್ಲದೆ ಇವುಗಳ ಈ ಬಣ್ಣ ಹಸಿರು, ಆಲಿವ್ ಅಥವಾ ಕಂದು ಬಣ್ಣಗಳ ಛಾಯೆಗಳಿರಬಹುದು. ದೇಹಾದ್ಯಂತ ಸಮವಾದ ಬಣ್ಣವಿರುತ್ತದೆ. ಆದರೆ ಈ ಹಾವುಗಳಿಗೆ ಹುರುಪೆಗಳ ನಡುವೆ ಚರ್ಮದಲ್ಲಿ ಗುರುತುಗಳಿವೆ. ಹಾವು ಆತ್ಮರಕ್ಷಣೆಗೆ ಶರೀರವನ್ನು ಹಿಗ್ಗಿಸಿದಾಗ ಈ ಗುರುತುಗಳು ಎದ್ದು ಕಾಣುತ್ತವೆ. ದೇಹದ ಕೆಳಭಾಗದಲ್ಲಿ ಅಡ್ಡಪಟ್ಟಿಗಳಿವೆ. ಉತ್ತರ ಭಾರತದ ಹಾವುಗಳಲ್ಲಿ ಈ ಪಟ್ಟಿಗಳು ಸಾಕಷ್ಟು ಪ್ರಮುಖವಾಗಿರುತ್ತವೆ. ಬಾಯಿಯ ಕೆಳ 'ತುಟಿ'ಯಲ್ಲಿ ಅನೇಕ ವೇಳೆ ಅಡ್ಡ ಗೀರುಗಳಿರುತ್ತವೆ. ಈ ಹಾವುಗಳು ಮೇಲ್ನೋಟಕ್ಕೆ ನಾಗರಹಾವನ್ನು ಹೋಲುತ್ತವೆ. ಆದರೆ ನಾಗರಹಾವಿಗೆ ಹೋಲಿಸಿದರೆ ವಾಸ್ತವವಾಗಿ ಕೇರೆ ಹಾವುಗಳು ಉದ್ದ ವಾಗಿರುತ್ತವೆ; ತೆಳುವಾಗಿರುತ್ತವೆ, ದುಂಡನೆಯ ತಲೆಯ ಬದಲು ಚೂಪಾದ ತಲೆ ಮತ್ತು ಪ್ರಮುಖವಾದ ಕಣ್ಣುಗಳನ್ನು ಹೊಂದಿರುತ್ತವೆ. ನಾಗರಹಾವು ಮತ್ತು ಕೇರೆ ಹಾವುಗಳನ್ನು ಹೋಲಿಸುವಾಗ ಕಣ್ಣುಗಳು, ಕುತ್ತಿಗೆ ಮತ್ತು ತಲೆಯನ್ನು ವಿಶೇಷವಾಗಿ ಗಮನಿಸಿ.

**ವಿತರಣೆ** : ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳೂ ಸೇರಿದಂತೆ ಭಾರತದ ಎಲ್ಲ ಪ್ರದೇಶಗಳಲ್ಲಿ ಹಾಗೂ ಸಮುದ್ರ ಮಟ್ಟದಿಂದ ಹಿಡಿದು 4000 ಮೀಟರುಗಳ ಎತ್ತರದ ಎಲ್ಲ ಪ್ರದೇಶಗಳಲ್ಲಿ ಕಂಡುಬರುತ್ತವೆ.

**ಆವಾಸ** : ಕೇರೆ ಹಾವು ಬಹುತೇಕ ಎಲ್ಲ ರೀತಿಯ ಪರಿಸರಕ್ಕೂ ಹೊಂದಿಕೊಳ್ಳಬಲ್ಲ ಸಾಮರ್ಥ್ಯವಿರುವ ಸರ್ಪ. ಕೇರೆ ಹಾವುಗಳು ವಾಸಿಸಲು ಇಷ್ಟಪಡುವ ಸ್ಥಳಗಳೆಂದರೆ ಇಲಿಯ ಬಿಲಗಳು ಮತ್ತು ಗೆದ್ದಲಿನ ಹುತ್ತಗಳು. ಈ ಹಾವು ಬೇಟೆಯಾಡುವ ಸ್ಥಳಗಳೆಂದರೆ ಭತ್ತದ ಗದ್ದೆಗಳು, ಎತ್ತರದ ಹುಲ್ಲುಗಾವಲುಗಳು ಮತ್ತು ದಾಸ್ತಾನು ಮಾಡಿರುವ ಸ್ಥಳಗಳು.

**ಸ್ವಭಾವಗಳು** : ಕೇರೆ ಹಾವು ಇಲಿಗಳ ಅಸಾಧಾರಣ ಭಕ್ಷಕ. ಮನುಷ್ಯ ವಾಸಿಸುವ ಸ್ಥಳಗಳಲ್ಲೇ ಇಲಿಗಳು ಹೆಚ್ಚಾಗಿರುವುದರಿಂದ, ಸಹಜವಾಗಿ ನಾವು ಬೇರೆಲ್ಲ ಹಾವುಗಳಿಗಿಂತ ಈ ಹಾವನ್ನು ಹೆಚ್ಚಾಗಿ ಕಾಣುತ್ತೇವೆ. ಇದು ಹಗಲಿನ ವೇಳೆ ಚಟುವಟಿಕೆಯಿಂದಿರುವ ಹಾವು. ಮನುಷ್ಯನ ಸಮೀಪ ವಾಸಿಸುವ ಇತರೆ ಪ್ರಾಣಿಗಳಂತೆ ಈ ಹಾವು ನಮ್ಮ ಚಟುವಟಿಕೆಗಳ ಆವರ್ತಗಳನ್ನು ಅರಿತು, ಆ ವೇಳೆಗಳಲ್ಲಿ ಬೇಟೆಯಾಡುವುದನ್ನು ತೊರೆದು ಮನುಷ್ಯನ ಸಂಪರ್ಕಕ್ಕೆ ಬರದಂತೆ ತಪ್ಪಿಸಿಕೊಳ್ಳುತ್ತದೆ. ಹೆದರಿದಾಗ ಗಂಟಲನ್ನು ಹಿಗ್ಗಿಸಿ ಭುಸುಗುಟ್ಟುತ್ತಾ ಭರದಿಂದ ಮೇಲೆರಗುತ್ತದೆ. ನಿರಪಾಯಕಾರಿಯಾದ ಈ ಹಾವಿನ ಕಡಿತ ಸ್ವಲ್ಪ ನೋವುಂಟುಮಾಡಬಹುದು. ಕೇರೆ ಹಾವು ನೋಡಲು ಸ್ವಲ್ಪಮಟ್ಟಿಗೆ ಕಾಳಿಂಗ ಸರ್ಪವನ್ನು ಹೋಲುತ್ತದೆ. ಅಲ್ಲದೆ ಕಾಳಿಂಗ ಸರ್ಪದಂತೆಯೇ ಸಿಟ್ಟಿಗೆದ್ದಾಗ ಗಡುಸಾದ ಗುರುಗುಟ್ಟುವ ಶಬ್ದ ಉಂಟುಮಾಡಬಹುದು.

**ಸಂತಾನ** : ಹೆಣ್ಣು ಹಾವು ಮುಖ್ಯವಾಗಿ ಮಾರ್ಚ್‌ನಿಂದ ಜುಲೈ ತಿಂಗಳುಗಳಲ್ಲಿ, ಕೆಲವೊಮ್ಮೆ ಚಳಿಗಾಲದ ಇತರೆ ತಿಂಗಳುಗಳಲ್ಲಿಯೂ, 8 ರಿಂದ 16

ಮೊಟ್ಟೆಗಳನ್ನಿಡುತ್ತದೆ. 60 ದಿನಗಳ ನಂತರ ಮೊಟ್ಟೆಗಳು ಒಡೆದು ಮರಿ ಕೇರೆ ಹಾವುಗಳು ಹೊರ ಬರುತ್ತವೆ.

**ಆಹಾರ :** ಕೇರೆ ಹಾವುಗಳು ಪ್ರಮುಖವಾಗಿ ದಂಶಕಗಳನ್ನು ತಿನ್ನುತ್ತವಾದರೂ, ಕಪ್ಪೆ, ಹಲ್ಲಿ, ಪಕ್ಷಿ ಹಾಗೂ ಕೆಲವೊಮ್ಮೆ ಚಿಕ್ಕ ಹಾವುಗಳನ್ನು ತಿನ್ನುತ್ತವೆ. ಮರಿ ಕೇರೆ ಹಾವುಗಳು ಮುಖ್ಯವಾಗಿ ಕಪ್ಪೆಗಳನ್ನು ತಿನ್ನುತ್ತವೆ. ಅವುಗಳ ಜೀವನದ ಮೊದಲ ವರ್ಷದಲ್ಲಿಯೇ ಮೂಗಿಲಿ ಹಾಗೂ ಇಲಿಗಳನ್ನು ಬೇಟೆಯಾಡಲು ಪ್ರಾರಂಭಿಸುತ್ತವೆ. ಕೇರೆ ಹಾವುಗಳು ಈಡು ಪ್ರಾಣಿಗಳನ್ನು ತಮ್ಮ ಶರೀರ ಹಾಗೂ ದವಡೆಗಳಿಂದ ಬಲವಾಗಿ ಅವುಚಿ ಸಾಯಿಸಿ ಅಥವಾ ಜೀವಂತವಾಗಿ ನುಂಗುತ್ತವೆ.

**ಪರಿಸ್ಥಿತಿ :** ದೀರ್ಘಕಾಲದಿಂದ ಬೃಹತ್ ಪ್ರಮಾಣದ ಅನಿಯಂತ್ರಿತ ಚರ್ಮ ವ್ಯಾಪಾರಕ್ಕೆ ಕೇರೆ ಹಾವು ಮತ್ತು ನಾಗರಹಾವುಗಳೇ ಮುಖ್ಯ ಆಧಾರವಾಗಿವೆ. ಕೇರೆ ಹಾವುಗಳು ಒಮ್ಮೆ ಸಮೃದ್ಧವಾಗಿದ್ದ ಕೆಲವು ಪ್ರದೇಶಗಳಲ್ಲಿ, ಇಂದು ಅವುಗಳ ಸಂತತಿಯೇ ಪೂರ್ಣವಾಗಿ ನಶಿಸಿಹೋಗಿದ್ದರ ಪರಿಣಾಮವಾಗಿ ದಂಶಕಗಳ ಸಂಖ್ಯೆ ಅಪಾರವಾಗಿ ಹೆಚ್ಚುತ್ತಿದೆ. ಅನೇಕ ಮೂಲನಿವಾಸಿಗಳ ಗುಂಪುಗಳು ಕೇರೆಹಾವಿನ ಚರ್ಮದ ಉದ್ಯಮವನ್ನು ಅವಲಂಬಿಸಿವೆ. ನಿರಂತರ ಇಳುವರಿಯಿಷ್ಟಿರಬೇಕೆಂಬುದನ್ನರಿತು ಅದಕ್ಕೆ ತಕ್ಕಂತೆ ಹಾವುಗಳ ವಿನಾಶವಾಗದಂತೆ ಸೂಕ್ತವಾಗಿ ಸಂತಾನಾಭಿವೃದ್ಧಿಯನ್ನು ನಿಯಂತ್ರಿಸಿ ಕೇರೆಹಾವುಗಳನ್ನು ಹಿಡಿಯುವ ಕ್ರಮ ಕೈಗೊಂಡರೆ ಮೂಲನಿವಾಸಿಗಳ ಜೀವನಕ್ಕೆ ಆಧಾರವನ್ನು ಒದಗಿಸಬಹುದು ಹಾಗೂ ಕೃಷಿಯ ಮೇಲೆ ದುಷ್ಪರಿಣಾಮ ಉಂಟಾಗದಂತೆ ನೋಡಿಕೊಳ್ಳಬಹುದು. (ಈ ಪುಸ್ತಕ ಬರೆಯುವ ವೇಳೆಗೆ ವಾಣಿಜ್ಯ ಸಚಿವಾಲಯವು ಕೇರೆ ಹಾವುಗಳ ಚರ್ಮದ ರಫ್ತನ್ನು ಪೂರ್ಣವಾಗಿ ನಿಲ್ಲಿಸಿದೆ. ಆದರೆ, ಭಾರತದೊಳಗೆ ಈ ಹಾವುಗಳ ಸಂತಾನಾಭಿವೃದ್ಧಿಯ ಕಾಲವನ್ನು ಲೆಕ್ಕಿಸದೆ ಚರ್ಮದ ಉದ್ಯಮ ಮುಂದುವರೆದಿದೆ).

*ನಿರುಪದ್ರವಿ*

# 14. ಪಟ್ಟೆಗಳಿರುವ ಶೀಘ್ರಗಾಮಿ ಸರ್ಪ (ಬ್ಯಾಂಡೆಡ್ ರೇಸರ್)

*ಆರ್ಗೈರೊಜಿನ ಫೇಸಿಯೊಲಾಟಸ್ (Argyrogena fasciolatus)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದರಿಂದ ಮಧ್ಯಮ ಗಾತ್ರವಿರುವ, ತೆಳುವಾದ ಶರೀರ ; ನುಣುಪಾದ ಹುರುಪೆಗಳು ; ಮರಿಗಳಿಗೆ ದಟ್ಟವರ್ಣದ ಪಟ್ಟೆಗಳಿರುತ್ತವೆ ; ವಯಸ್ಕ ಹಾವುಗಳಿಗೆ ವಿನ್ಯಾಸವಿಲ್ಲದ, ಸಮನಾದ ಪಟ್ಟೆಗಳಿರುತ್ತವೆ.

**ಸರಾಸರಿ ಉದ್ದ :** 75 ಸೆಂ.ಮೀ.; ಹುಟ್ಟಿದಾಗ : 15 ಸೆಂ.ಮೀ.; ಗರಿಷ್ಠ : 1.25 ಮೀ.

**ವಿವರಣೆ :** ಬ್ಯಾಂಡೆಡ್ ರೇಸರ್ ಹಾವು ತಿಳಿಯಾದ ಅಥವಾ ದಟ್ಟವಾದ ಕಂದುಬಣ್ಣ ಹೊಂದಿದೆ. ಮರಿ ಹಾವುಗಳಿಗೆ ಸಮಾಂತರದಲ್ಲಿ ಬಿಳಿ ಅಡ್ಡಪಟ್ಟೆಗಳಿವೆ. ಕುತ್ತಿಗೆಗಿಂತ



ಪಟ್ಟೆಗಳಿರುವ ಶೀಘ್ರಗಾಮಿ ಸರ್ಪ (ಬ್ಯಾಂಡೆಡ್ ರೇಸರ್)

ತಲೆಯು ಸ್ವಲ್ಪ ಅಗಲವಾಗಿರುತ್ತದೆ ಹಾಗೂ ಮೂಗು ಚೂಪಾದ ತುದಿಯನ್ನು ಹೊಂದಿದೆ. ಹುರುಪೆಗಳು ನುಣುಪಾಗಿವೆ. ಆದರೆ ಹೊಳೆಯುವುದಿಲ್ಲ ; ಶರೀರದ ತಳಭಾಗವು ಬಿಳಿ ಅಥವಾ ಹಳದಿ.

**ವಿತರಣೆ :** ಭಾರತದ ಬಹಳಷ್ಟು ಬಯಲು ಪ್ರದೇಶಗಳಲ್ಲಿ.

**ಆವಾಸ :** ಚುರುಕಾದ, ವೇಗವಾಗಿ ಚಲಿಸುವ ಈ ಹಾವು ಎತ್ತರದ ಹುಲ್ಲುಗಾವಲು ಅಥವಾ ಪೊದೆಗಳಲ್ಲಿ ವಾಸಿಸಲು ಇಷ್ಟಪಡುತ್ತದೆ. ಈ ಹಾವುಗಳು ದಂಶಕಗಳ ಬಿಲ, ಕಲ್ಲುರಾಶಿ ಹಾಗೂ ದಟ್ಟವಾದ ಪೊದೆಗಳಲ್ಲಿರುತ್ತವೆ.

**ಸ್ವಭಾವಗಳು :** ಬೆಳಗಿನ ಹೊತ್ತು ಇದು ಬಲಿಷ್ಠ ಹಾಗೂ ಚುರುಕಿನ ಪ್ರಾಣಿ ; ಹಿಡಿದಾಗ ಈ ಹಾವು ಕಡಿಯಬಹುದು ಮತ್ತು ಕುತ್ತಿಗೆ ಭಾಗದ ಪಕ್ಕೆಲುಬುಗಳನ್ನು ಚಪ್ಪಟೆಗೊಳಿಸಿ ಕಿರಿದಾದ 'ಹೆಡೆ' ಯನ್ನು ಪ್ರದರ್ಶಿಸಬಹುದು. ಇವನ್ನು ಹಿಡಿದ ಸ್ವಲ್ಪ ಸಮಯದ ನಂತರ ಶಾಂತವಾಗಿ ಸಾಕುಪ್ರಾಣಿಯಂತಾಗುತ್ತವೆ.

**ಸಂತಾನ :** ದಕ್ಷಿಣ ಭಾರತದಲ್ಲಿ ಹೆಣ್ಣು ಹಾವು ಅಕ್ಟೋಬರ್ ತಿಂಗಳಲ್ಲಿ 2 ರಿಂದ 6 ಮೊಟ್ಟೆಗಳನ್ನಿಡುತ್ತದೆ.

**ಆಹಾರ :** ಮರಿ ಹಾವು ಕೀಟ ಮತ್ತು ಕಪ್ಪೆಗಳನ್ನು ತಿನ್ನುತ್ತದೆ. ವಯಸ್ಕ ಹಾವುಗಳು ಬಯಲಿಲಿ ಮತ್ತು ಹೆಗ್ಗಣಗಳನ್ನು ತಿನ್ನುತ್ತವೆ. ಈ ಹಾವುಗಳು ದಂಶಕಗಳನ್ನು ಬೆನ್ನಟ್ಟಿ ಬಿಲಗಳಿಗೆ ನುಗ್ಗುತ್ತವೆ ಹಾಗೂ ತಮ್ಮ ಶರೀರದಿಂದ ಹಿಸುಕಿ ನಿಶ್ಚೇಷ್ಟಿತಗೊಳಿಸುತ್ತವೆ.

**ಪರಿಸ್ಥಿತಿ :** ಗಿಡಮರಗಳ ನಾಶ ಹಾಗೂ ತೀವ್ರ ಮೇಯುವಿಕೆಯಿಂದಾಗಿ ಅನೇಕ ಪ್ರದೇಶಗಳಲ್ಲಿ ಈ ಹಾವುಗಳ ಆವಾಸಗಳು ಕಡಿಮೆಯಾಗುತ್ತಿವೆ.

*ನಿರುಪದ್ರವಿ*

# 15. ರಾಜ ಸರ್ಪ

*ಸ್ಪಲಿರೊಸೊಫಿಸ್ ಡೈಯಡಿಮ (Spalerosophis diadema)*

**ವಿಶಿಷ್ಟ ಲಕ್ಷಣಗಳು :** ಮಧ್ಯಮದಿಂದ ಬೃಹತ್ ಗಾತ್ರ ; ಏಣೆರುವ ಹುರುಪೆಗಳು: ಸಮವಾದ ಚುಕ್ಕೆಗಳಿರುವ ನಮ್ರ ಹಾವುಗಳು ; ವಯಸ್ಕ ಹಾವುಗಳಿಗೆ ಕಪ್ಪುಬಣ್ಣದ ತಲೆ ಮತ್ತು ಶರೀರದ ಮೇಲೆ ಅಡ್ಡಾದಿಡ್ಡಿ ಕಪ್ಪು ಕಲೆಗಳಿರುತ್ತವೆ.

ಸರಾಸರಿ ಉದ್ದ : 1.5 ಮೀ.; ಹುಟ್ಟಿದಾಗ: ಸುಮಾರು 25 ಸೆಂ.ಮೀ.; ಗರಿಷ್ಠ: 2 ಮೀ.

**ವಿವರಣೆ :** ರಾಜಸರ್ಪದ ಒಟ್ಟಾರೆ ಬಣ್ಣ ಹಳದಿಯ ಕಂದು ಅಥವಾ ಕಿತ್ತಳೆಯಾಗಿದ್ದು, ಬೆನ್ನಿನ ಭಾಗದಲ್ಲಿ ಅಸಮವಾದ ಕಪ್ಪು ಕಲೆಗಳಿರುತ್ತವೆ. ತಲೆ ಮತ್ತು ಕುತ್ತಿಗೆಯು ದಟ್ಟವಾದ ಕಪ್ಪು ಬಣ್ಣವಿರುತ್ತವೆ. ಶರೀರದ ತಳಭಾಗವು ಹೊಳೆಯುವ ಗುಲಾಬಿ ಬಣ್ಣ ಹೊಂದಿರುತ್ತದೆ. ಮೇಲ್ಭಾಗದ ಹುರುಪೆಗಳು ಬಲವಾದ ಏಣುಗಳನ್ನು ಹೊಂದಿ ಶರೀರವು ಒಟ್ಟಾರೆ ಸುಂದರವಾದ ಹೊಳಪನ್ನು ಪಡೆದಿರುತ್ತದೆ. ನಮಗೆ ತಿಳಿದಿರುವಂತೆ ಭಾರತದ ಹಾವುಗಳಲ್ಲಿ ರಾಜಸರ್ಪದಲ್ಲಿ ಮಾತ್ರ, ಹಾವಿನ ಮರಿ ಬೆಳೆಯುತ್ತಾ

ಹೋದಂತೆ ಅದರ ಶರೀರದ ಮಚ್ಚೆಗಳು ಬದಲಾಗುತ್ತವೆ. ಮರಿಹಾವುಗಳು ವಯಸ್ಕ ಹಾವುಗಳಿಗಿಂತ ಭಿನ್ನವಾಗಿರುತ್ತವೆ, ಅವುಗಳಲ್ಲಿ ಕ್ರಮಬದ್ಧವಾದ ಹಾಗೂ ತಿಳಿಯಾದ ಬಣ್ಣದ ಮಚ್ಚೆಗಳಿವೆ ಹಾಗೂ ಕಪ್ಪು ಗುರುತುಗಳಿರುವುದಿಲ್ಲ. ರಾಜಸರ್ಪ ಬೃಹತ್ ಶರೀರಿಯಾಗಿರುವುದರಿಂದ ಬೇಗನೆ ಕಣ್ಣಿಗೆ ಬೀಳುತ್ತದೆ. ಉತ್ತರ ಭಾರತದ ಹಾವಾಡಿಗರ ಹತ್ತಿರ ಸಾಮಾನ್ಯವಾಗಿ ಈ ಹಾವು ಇರುವುದನ್ನು ನೋಡಬಹುದು.

**ವಿತರಣೆ :** ಈ ಹಾವು ಸಮುದ್ರ ಮಟ್ಟದಿಂದ 2000 ಮೀಟರುಗಳವರೆಗೆ ಎತ್ತರವಿರುವ ರಾಜಾಸ್ಥಾನ, ಪಂಜಾಬ್, ಕಾಶ್ಮೀರ ಮತ್ತು ಹಿಮಾಚಲ ಪ್ರದೇಶದ ಶುಷ್ಕ ಪ್ರದೇಶಗಳಲ್ಲಿ ಮಾತ್ರ ಕಂಡುಬರುತ್ತದೆ (ರಾಜಕೀಯ ಗಡಿಗಳಿರುವ ಯಾವುದೇ ಭೂಪಟ ನೋಡಿ).

**ಆವಾಸ :** ರಾಜಸರ್ಪವು ಇಲಿಯ ಬಿಲಗಳಲ್ಲಿ, ಕಲ್ಲುಬಂಡೆಗಳಿರುವ ಪ್ರದೇಶಗಳು ಹಾಗೂ ಕೊರಕಲುಗಳಲ್ಲಿ ಜೀವಿಸುತ್ತವೆ. ಅತ್ಯಂತ ಚೆನ್ನಾಗಿ ಮತ್ತು ವೇಗವಾಗಿ ಮರ ಹತ್ತಬಲ್ಲ ಇದು ಶುಷ್ಕ ಹಾಗೂ ಅರೆಶುಷ್ಕ ಪ್ರದೇಶಗಳ ಮರಗಳು ಹಾಗೂ ಪೊದೆಗಳಲ್ಲಿ ಕಂಡುಬರುತ್ತದೆ.

**ಸ್ವಭಾವ:** ರಾಜಸರ್ಪಗಳು ಪ್ರಧಾನವಾಗಿ ಬೆಳಗಿನ ಹೊತ್ತು ಚಟುವಟಿಕೆಯಿಂದಿರುತ್ತವೆ. ಇವು ಆಕಾರ ಹಾಗೂ ನಡವಳಿಕೆಯಲ್ಲಿ ಟ್ರಿಂಕೆಟ್ ಹಾವುಗಳಂತಿದ್ದರೂ, ಬೃಹತ್ ಶರೀರಿಗಳಾಗಿ ಬೆಳೆಯುತ್ತವೆ. ಅಲ್ಲದೆ ಚಟುವಟಿಕೆ ಹಾಗೂ ಪ್ರತಿಕ್ರಿಯೆಯಲ್ಲಿ ಟ್ರಿಂಕೆಟ್ ಹಾವುಗಳಿಗಿಂತ ಹೆಚ್ಚು ಚುರುಕು. ಕೆಣಕಿದಾಗ ಇವು ತಮ್ಮ ಶರೀರವನ್ನು ಸುತ್ತಿಕೊಂಡು ಜೋರಾಗಿ ಭುಸುಗುಟ್ಟುತ್ತವಾದರೂ ಕಡಿಯುವುದು ಅಪರೂಪ.

**ಸಂತಾನ :** ರಾಜಸರ್ಪಗಳು ಮೊಟ್ಟೆಯಿಡುತ್ತವೆ. ಆದರೆ ಯಾವ ತಿಂಗಳಲ್ಲಿ ಮತ್ತು ಎಷ್ಟು ಮೊಟ್ಟೆಗಳನ್ನಿಡುತ್ತವೆ ಎಂಬುದು ತಿಳಿದುಬಂದಿಲ್ಲ.

**ಆಹಾರ :** ರಾಜಸರ್ಪಗಳು ಮುಖ್ಯವಾಗಿ ದಂಶಕ ಭಕ್ಷಕಗಳು. ಆದರೆ ಹಲ್ಲಿ ಹಾಗೂ ಪುಟ್ಟ ಪಕ್ಷಿಗಳನ್ನೂ ಬೇಟೆಯಾಡುತ್ತವೆ.

**ಪರಿಸ್ಥಿತಿ :** ಅವುಗಳ ವಿತರಣಾ ವಲಯದಲ್ಲಿ ರಾಜಸರ್ಪಗಳು ಸರ್ವೇಸಾಮಾನ್ಯವಾಗಿ ಕಂಡುಬರುತ್ತವೆ. ದಂಶಕಗಳನ್ನು ಬೇಟೆಯಾಡುವ ಜೀವಿಗಳಲ್ಲಿ ಇವು ಮುಖ್ಯವಾದವು. ಅನೇಕರು ಇವನ್ನು ವಿಷಸರ್ಪಗಳೆಂದು ತಪ್ಪಾಗಿ ತಿಳಿದು ಕಂಡಲ್ಲಿ ಕೊಲ್ಲುತ್ತಾರೆ. ನಾಗರಹಾವಿಗೂ ಈ ಹಾವುಗಳಿಗೂ ಸ್ಪಷ್ಟವಾದ ವ್ಯತ್ಯಾಸವಿದ್ದರೂ ಜನರು ಇವನ್ನು 'ನಾಗರ'ವೆಂದು ಕರೆಯುವುದುಂಟು.

ನಿರುಪದ್ರವಿ

# 16. ಕಂಚು ಬೆನ್ನಿನ ಮರದ ಹಾವು

*ಡೆಂಡ್ರೆಲಾಫಿಸ್ ಟ್ರಿಸ್ಟಿಸ್ (Dendrelaphis tristis)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರ ; ತುಂಬಾ ತೆಳುವಾದ ಶರೀರ ; ನುಣುಪಾದ ಹುರುಪೆಗಳು ; ತಲೆಯಿಂದ ಬಾಲದವರೆಗೆ ಮೇಲ್ಭಾಗದಲ್ಲಿ ಕಂದು ಅಥವಾ ಕಂಚಿನ ವರ್ಣದ ಪಟ್ಟೆ.



ಕಂಚು ಬೆನ್ನಿನ ಮರದ ಹಾವು

**ಸರಾಸರಿ ಉದ್ದ :** 1 ಮೀ. ; ಹುಟ್ಟಿದಾಗ : 15 ಸೆಂ.ಮೀ. ; ಗರಿಷ್ಠ : 1.5 ಮೀ.
**ವಿವರಣೆ :** ಕಂಚು ಬೆನ್ನಿನ ಈ ಹಾವುಗಳು ತೆಳುವಾದ ಹಾಗೂ ಉದ್ದನೆಯ ಶರೀರ ಹೊಂದಿದ್ದು, ತಲೆ ಮೊಂಡಾಗಿದ್ದು, ಕಣ್ಣು ದೊಡ್ಡದಾಗಿರುತ್ತದೆ. ಅಕ್ಕ ಪಕ್ಕಗಳಲ್ಲಿ ಕಡು ಕಂಚು ಅಥವಾ ಕಪ್ಪು ಬಣ್ಣವಿರುತ್ತದೆ. ಅಲ್ಲದೆ ಬೆನ್ನಿನ ಮೇಲೆ ಮಧ್ಯಭಾಗದಿಂದ ಹಿಂದಕ್ಕೆ ಅಗಲವಾದ ಹಾಗೂ ತಿಳಿ ಕಂಚು ಬಣ್ಣದ ಪಟ್ಟಿಯಿರುತ್ತದೆ. ಶರೀರದ ತಳಭಾಗವು ಬಿಳಿಯ ಬೂದು ಅಥವಾ ತಿಳಿ ಹಸಿರು ಬಣ್ಣವಿರುತ್ತವೆ. ಮರಿ ಹಾವುಗಳು ವಯಸ್ಕ ಹಾವುಗಳನ್ನು ಹೋಲುವಂತಿದ್ದರೂ ಒಂದು ವರ್ಷದವರೆಗೆ ಲಘುವಾದ ಅಡ್ಡಪಟ್ಟಿಗಳ ವಿನ್ಯಾಸವನ್ನು ಪಡೆದಿರುತ್ತವೆ. ಉದರದ ಹುರುಪೆಗಳ ಹೊರತುದಿಯಲ್ಲಿ ಕಚ್ಚುಗಳಿದ್ದು, ಶರೀರದ ಎರಡೂ ಪಕ್ಕಗಳಲ್ಲಿ ಮಡಚಿಕೊಂಡಂತೆ ಮರ ಹತ್ತುವಾಗ ಸಹಾಯಕ. ಭಾರತದಲ್ಲಿನ ಕಂಚು ಬೆನ್ನಿನ ಹಾವುಗಳಲ್ಲಿ 8 ಪ್ರಭೇದಗಳಿದ್ದು, ಅನೇಕ ಹಾವುಗಳು ಬೆಟ್ಟ ಗುಡ್ಡಗಳಿರುವ ಅರಣ್ಯಗಳಲ್ಲಿ ವಾಸಿಸುತ್ತವೆ.
**ವಿತರಣೆ :** ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳೂ ಸೇರಿದಂತೆ ಭಾರತದ ಎಲ್ಲ ಪ್ರದೇಶಗಳಲ್ಲಿವೆ. ಹಿಮಾಲಯ ಪರ್ವತಗಳಲ್ಲಿ ಸಮುದ್ರ ಮಟ್ಟದಿಂದ 2000 ಮೀಟರುಗಳ ಎತ್ತರದವರೆಗೂ ಕಂಡುಬರುತ್ತವೆ.
**ಆವಾಸ :** ಮರದ ವಾಸಿಗಳು. ಚಿಕ್ಕ ಪೊದೆಗಳು, ಗೊಬ್ಬಳಿಮರ, ಈಚಲುಮರ, ತಾಳೆಮರಗಳಂತಹ ಮುಳ್ಳು ಮರಗಳಲ್ಲಿ ಜೀವಿಸುತ್ತವೆ.
**ಸ್ವಭಾವ :** ಕಂಚು ಬೆನ್ನಿನ ಮರದ ಹಾವುಗಳು ತುಂಬಾ ಎಚ್ಚರಿಕೆಯ ಜೀವಿಗಳು. ಚಲಿಸುವಾಗ ಅಥವಾ ಕೆಣಕಿದಾಗ ಅವು ತಮ್ಮ ಶಿರ ಹಾಗೂ ಶರೀರದ ಮುಂಭಾಗವನ್ನು ವಿಚಿತ್ರವಾಗಿ 'ಓಲಾಡುವುದಕ್ಕೆ' ಬಳಸಿಕೊಳ್ಳುತ್ತವೆ. ಅವು ಬೆಳಗಿನ ವೇಳೆ ಚಟುವಟಿಕೆಯಿಂದಿರುವ ಹಾವುಗಳು. ಬೇಸಗೆಯ ಅತಿ ಹೆಚ್ಚು ಧಗೆಯಿರುವ ಕಾಲದಲ್ಲಿಯೂ ಹೆಚ್ಚಿನ ಚಟುವಟಿಕೆಯಿಂದಿರುತ್ತವೆ. ಈ ಹಾವುಗಳು ಉದ್ವೇಗಗೊಂಡಾಗ, ತಮ್ಮ ಶರೀರ ಹಾಗೂ ಶಿರವನ್ನು ಹಿಗ್ಗಿಸಿಕೊಂಡು ಹುರುಪೆಗಳ ನಡುವಿನ ಬಿಳುಪು ಅಥವಾ ಕಡುನೀಲಿ ಬಣ್ಣವನ್ನು ಪ್ರದರ್ಶಿಸುತ್ತವೆ. ಇವನ್ನು ಹಿಡಿದಾಗ ತಕ್ಷಣ ಮೇಲೆರಗುತ್ತವೆ ಮತ್ತು ಕಡಿಯುತ್ತವೆ. ಆದರೆ ಸರಿಯಾಗಿ ಪಳಗಿಸಿಕೊಂಡರೆ ಶಾಂತವಾಗುತ್ತವೆ. ಇತರೆ ಹಾವುಗಳಿಗಿರುವಂತೆ, ಈ ಹಾವುಗಳಿಗೆ ಮರದಿಂದ ಕೆಳಕ್ಕೆ ಬೀಳುವ ಭಯವಿರುವುದಿಲ್ಲ. ಅವು ಸಾಮಾನ್ಯವಾಗಿ ಕೊಂಬೆಗಳಿಂದ ಕೊಂಬೆಗಳಿಗೆ ಮತ್ತು 10ರಿಂದ 20 ಮೀಟರ್ ಎತ್ತರದಿಂದ ನೆಲಕ್ಕೆ ಜಿಗಿಯುತ್ತಿರುತ್ತವೆ. ಇವು ತೆರೆದ ಸ್ಥಳದಲ್ಲಿರುತ್ತವೆ ಹಾಗೂ ಅಡಗಿಕೊಳ್ಳುವುದು ಅಪರೂಪ.
**ಸಂತಾನ :** ಹೆಣ್ಣು ಹಾವು ಮರಗಳಲ್ಲಿನ ಬಿಲ ಅಥವಾ ಪಕ್ಷಿಯ ಹಳೆಯ ಗೂಡುಗಳಲ್ಲಿ ಉದ್ದ ಹಾಗೂ ತೆಳುವಾದ, ಸುಮಾರು 6 ಮೊಟ್ಟೆಗಳನ್ನಿಡುತ್ತದೆ. ಚೆನ್ನೈನಲ್ಲಿ ಒಂದು ಹಾವು ಏಪ್ರಿಲ್ 6 ರಂದು 7 ಮೊಟ್ಟೆಗಳನ್ನಿಟ್ಟಿತು. ಆ ಮೊಟ್ಟೆಗಳು ಮೇ ತಿಂಗಳ 30 ರಂದು ಒಡೆದು ಮರಿಗಳು ಹೊರಬಂದವು.

**ಆಹಾರ :** ಮುಖ್ಯವಾಗಿ ಕಪ್ಪೆಗಳು ಮತ್ತು ಹಲ್ಲಿಗಳು. ಗುಡಿಸಲುಗಳ ಮೇಲ್ಛಾವಣಿಗಳಲ್ಲಿ ಈ ಹಾವುಗಳು ಮರಗಪ್ಪೆ ಮತ್ತು ಹಲ್ಲಿಗಳನ್ನು ಹಿಡಿದು ತಿನ್ನುವ ನೋಟ ಸಾಮಾನ್ಯ. ಇದರಿಂದಾಗಿ ಗುಡಿಸಲು ವಾಸಿಗಳಿಂದ ಹಾವುಗಳಿಗೆ ಕೆಲವೊಮ್ಮೆ ತೊಂದರೆ ಯಾಗುವುದುಂಟು.

**ಪರಿಸ್ಥಿತಿ :** ಸಾಮಾನ್ಯ.

**ಟಿಪ್ಪಣಿ :** ನಿರುಪದ್ರವಿಯಾದ ಈ ಹಾವಿನ ಬಗ್ಗೆ ಹಲವಾರು ಕಟ್ಟುಕಥೆಗಳಿವೆ. ವ್ಯಕ್ತಿಯೊಬ್ಬನನ್ನು ಕಡಿದ ಮೇಲೆ, ಅವನ ಹೆಣ ಸುಡುವುದನ್ನು ನೋಡಲು ಈ ಹಾವುಗಳು ಎತ್ತರವಾದ ಮರವನ್ನು ಹತ್ತುತ್ತವೆಂಬ ತಪ್ಪು ನಂಬಿಕೆ ತಮಿಳುನಾಡಿನಲ್ಲಿದೆ!

*ನಿರುಪದ್ರವಿ*

# 17. ಹಾರುವ ಸರ್ಪ

*ಕ್ರೈಸೋಪೆಲಿಯ ಆರ್ನೇಟ (Chrysopelea Ornata)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದರಿಂದ ಮಧ್ಯಮ ಗಾತ್ರದವರೆಗಿನ ತೆಳುವಾದ ಶರೀರ ; ನುಣುಪಾದ ಹುರುಪೆಗಳು ; ಹೊಳೆಯುವ ಕಪ್ಪು, ಹಳದಿ ಮತ್ತು ಕೆಂಪು ಬಣ್ಣಗಳ ವಿನ್ಯಾಸ.

**ಸರಾಸರಿ ಉದ್ದ :** 1 ಮೀ. ; ಹುಟ್ಟಿದಾಗ : 20 ಸೆಂ.ಮೀ. ; ಗರಿಷ್ಠ : 1.75 ಮೀ.

**ವಿವರಣೆ :** ಶೀಘ್ರಗಾಮಿ, ವರ್ಣಮಯ ಹಾಗೂ ತೆಳುವಾದ ಶರೀರವಿರುವ ಹಾರುವ ಸರ್ಪವನ್ನು ಮೊದಲು ನೋಡಿದಾಗ ಅತ್ಯಂತ ಬಲಿಷ್ಠ ಪ್ರಾಣಿಯೆಂಬ ಅಭಿಪ್ರಾಯ ಮೂಡುತ್ತದೆ. ಈ ಹಾವಿನ ಮೇಲ್ಭಾಗ ಕಪ್ಪು ಬಣ್ಣವಿದ್ದು, ಅದರ ಮೇಲೆ ಹಳದಿ ಅಥವಾ ಬಿಳಿಯ ಸುಂದರವಾದ ಅಡ್ಡಪಟ್ಟಿಗಳು, ಚುಕ್ಕೆಗಳು ಹಾಗೂ ಕೆಂಪು ಬಣ್ಣದ ಗುಚ್ಛಗಳಿರುತ್ತವೆ. ಶರೀರದ ತಳಭಾಗವು ಹಸಿರು ಬಣ್ಣದ್ದಿರುತ್ತದೆ. ಕಂಚು ಬೆನ್ನಿನ ಹಾವುಗಳಲ್ಲಿರುವಂತೆ ಉದರದ ಹುರುಪೆಗಳಿಗೆ ಎರಡೂ ಪಾರ್ಶ್ವಗಳಲ್ಲಿ ಹೊದಿಕೆಗಳಿದ್ದು, ಅವು ಮರಹತ್ತಲು ಸಹಾಯಕವಾಗಿವೆ. ತಲೆಯ ಮೇಲೆ ಹೊಳೆಯುವ ಅಡ್ಡ ರೇಖೆಗಳಿವೆ. ವಿವಿಧ ಪ್ರದೇಶಗಳ ಹಾರುವ ಸರ್ಪಗಳಲ್ಲಿ ಬಣ್ಣಗಳ ಹಾಗೂ ವಿನ್ಯಾಸಕ್ರಮದಲ್ಲಿ ವ್ಯತ್ಯಾಸವಿರುತ್ತದೆ. ಹುರುಪೆಗಳು ನುಣುಪಾಗಿದ್ದು ಸ್ವಲ್ಪ ಮಿಂಚುತ್ತವೆ.

**ವಿತರಣೆ :** ಈ ಸರ್ಪಗಳು ಸಮುದ್ರ ಮಟ್ಟದಿಂದ 2000 ಮೀಟರ್ ಎತ್ತರದವರೆಗೆ ಇರುವ ಈಶಾನ್ಯ ಭಾರತ, ಉತ್ತರ ಬಿಹಾರ ಮತ್ತು ಒರಿಸ್ಸಾದ ಅರಣ್ಯಗಳು ಹಾಗೂ ನೈಋತ್ಯ ಭಾರತದ ಅರಣ್ಯಗಳಿರುವ ಬೆಟ್ಟಗಳಲ್ಲಿ ಕಂಡುಬರುತ್ತವೆ. ಅಂಡಮಾನ್ ದ್ವೀಪ ಸಮೂಹದಲ್ಲಿ ಒಂದು ದ್ವೀಪವಾದ ನಾಕೊಂಡಮ್‌ನಲ್ಲಿ ಪ್ಯಾರಾಡೈಸ್ ಹಾರುವ ಸರ್ಪ (ಸಿ. ಪ್ಯಾರಾಡೈಸಿ) ಎಂಬ ಪ್ರಭೇದವು ಸಾಮಾನ್ಯವಾಗಿ ಕಂಡುಬರುತ್ತದೆ.



ಘಂಟೆಯ ಸರ್ಪ

**ಆವಾಸ:** ಈ ಹಾವು ದಟ್ಟವಾದ ಅರಣ್ಯ ಹಾಗೂ ಬೃಹತ್ ವೃಕ್ಷಗಳನ್ನು ಹೆಚ್ಚು ಪ್ರೀತಿಸುವಂತೆ ಕಾಣುತ್ತದೆ. (ಆದರೆ ಶ್ರೀಲಂಕಾ ಮತ್ತು ಥೈಲ್ಯಾಂಡ್ ದೇಶಗಳಲ್ಲಿ ಮನೆ ಮತ್ತು ತೋಟಗಳ ಸುತ್ತಲೂ ಕಂಡುಬರುತ್ತದೆ.)

**ಸ್ವಭಾವ:** ಈ ಸರ್ಪ ಬೆಳಗಿನ ವೇಳೆ ಹೆಚ್ಚು ಚಟುವಟಿಕೆಯಿಂದಿರುತ್ತದೆ. ಶತ್ರುಗಳಿಂದ ತಪ್ಪಿಸಿಕೊಳ್ಳಲು, ಕಂಚು ಬೆನ್ನಿನ ಹಾವುಗಳಂತೆ ಇದೂ ಸಹ ಅತಿ ಎತ್ತರದ ಕೊಂಬೆಗಳಿಂದ ಜಿಗಿಯಬಲ್ಲದು. ಮಿಚಿಗನ್ ವಿಶ್ವವಿದ್ಯಾಲಯದ ವಿಜ್ಞಾನಿಗಳು ಈ ಹಾವಿನ ಹಾರಾಟದ ಅಧ್ಯಯನ ಮಾಡಿ ವಿಶ್ಲೇಷಣೆ ನೀಡಿದ್ದಾರೆ. ಈ ಹಾವುಗಳು ಹಾರುವಾಗ ಪಕ್ಕೆಲುಬುಗಳನ್ನು ಚಾಚುತ್ತವೆ ಮತ್ತು ಶರೀರದ ತಳಭಾಗವನ್ನು ಒಳಕ್ಕೆಳೆದುಕೊಳ್ಳುತ್ತವೆ. ಈ ರೀತಿ ಶರೀರವನ್ನು ಚಪ್ಪಟೆಮಾಡಿಕೊಂಡು 'ಹಾರುವ' ಸರ್ಪವು ಗ್ಲೈಡರ್ ರೀತಿ ವರ್ತಿಸುವುದರಿಂದ ನೇರವಾಗಿ ಕೆಳಕ್ಕೆ ಬೀಳುವುದಿಲ್ಲ. ಈ ಸರ್ಪವು ಮರಗಳ ಮಧ್ಯೆಯ ರೆಂಬೆಗೆ ಜಿಗಿಯುವುದು ಒಂದು ಸುಂದರ ದೃಶ್ಯ.

**ಸಂತಾನ :** ಎಂ. ಎ. ಸ್ಮಿತ್ ಪ್ರಕಾರ ಹೆಣ್ಣು ಹಾವು 6 ರಿಂದ 12 ಮೊಟ್ಟೆಗಳನ್ನಿಡುತ್ತದೆ. ಬಂಗಾಳದಲ್ಲಿ ಈ ಹಾವುಗಳು ಫೆಬ್ರವರಿ ಹಾಗೂ ಮಾರ್ಚ್ ತಿಂಗಳಲ್ಲಿ ಮೊಟ್ಟೆಯಿಡುತ್ತವೆ.

**ಆಹಾರ :** ಹಾರುವ ಸರ್ಪಗಳ ಸ್ವಭಾವ ಕಂಚು ಬೆನ್ನಿನ ಹಾವುಗಳಂತಿರುತ್ತದೆ. ಅವುಗಳಂತೆಯೇ ಹಾರುವ ಸರ್ಪಗಳು ಕಪ್ಪೆ, ಹಲ್ಲಿ (ಮರದ ಹಲ್ಲಿಗಳನ್ನೂ ಸಹ) ಸಣ್ಣಪುಟ್ಟ ಪಕ್ಷಿಗಳು ಹಾಗೂ ಬಹುಶಃ ಅವುಗಳ ಮೊಟ್ಟೆಗಳನ್ನೂ ತಿನ್ನುತ್ತವೆ. ಈ ಹಾವಿಗೆ ಹಿಂದವಡೆಯಲ್ಲಿ 'ದಂತ'ಗಳು ಮತ್ತು ಸ್ವಲ್ಪ ವಿಷಕಾರಿಯಾದ ಜೊಲ್ಲುರಸವಿದ್ದರೂ ಈಡುಜೀವಿಗಳನ್ನು ಜೀವಂತವಾಗಿ ನುಂಗುತ್ತದೆ. ಜೊಲ್ಲುರಸದ ವಿಷವು ಬಹುಶಃ ಈಡುಜೀವಿಯನ್ನು ನಿಶ್ಚಲಗೊಳಿಸುವ ಪರಿಣಾಮ ಬೀರಬಹುದು.

**ಪರಿಸ್ಥಿತಿ :** ಪಶ್ಚಿಮ ಘಟ್ಟಗಳಲ್ಲಿ(ಕಾಲಕ್ಕಾಡು, ತಮಿಳುನಾಡು) ನಾವು ಒಂದೇ ಒಂದು ಹಾರುವ ಸರ್ಪವನ್ನು ಸಂಗ್ರಹಿಸಿದ್ದೇವೆ. ಇಲ್ಲಿ ಇದು ತುಂಬ ಅಪರೂಪದ ಹಾವು. ಬಂಗಾಳದಲ್ಲಿ ಪ್ರಾಣಿಗಳನ್ನು ಮಾರುವ ಮಾರುಕಟ್ಟೆಯಲ್ಲಿ ಈ ಹಾವು ಸಾಮಾನ್ಯ. ಅಮೆರಿಕಾ ಮತ್ತು ಯುರೋಪ್ ದೇಶಗಳ ಸರ್ಪಪ್ರಿಯರ ದೃಷ್ಟಿಯಲ್ಲಿ ಈ ಸರ್ಪ ಜನಪ್ರಿಯವಾಗಿರುವುದು ದುರದೃಷ್ಟಕರ. ಅದರಿಂದಾಗಿ ಈ ಸರ್ಪವನ್ನು ಅಪಾರ ಸಂಖ್ಯೆಯಲ್ಲಿ ಹಿಂದೆ ರಫ್ತು ಮಾಡಲಾಗುತ್ತಿತ್ತು. ಹಾವಾಡಿಗರು ಈ ಸರ್ಪವನ್ನು 'ತುಂಬ ವಿಷಕಾರಿ'ಯೆಂದು ತೋರಿಸಿ ಹೆದರಿಸುತ್ತಾರೆ. ಅವರ ಪ್ರಕಾರ ಅತಿ ವರ್ಣಮಯವಾದ ಹಾವು, ಅತಿ ವಿಷಕಾರಿ. ಧೈರ್ಯವಂತರು ಮಾತ್ರ ವರ್ಣಮಯ ಸರ್ಪವನ್ನು ಹಿಡಿಯಬಲ್ಲರು!

# 18. ಹಸಿರು ಹಾವು

*ಆಹೇಟುಲ ನಾಸುಟಸ್ (Ahaetulla nasutus)*

**ವಿಶಿಷ್ಟ ಲಕ್ಷಣಗಳು :** ಮಧ್ಯಮದಿಂದ ಬೃಹತ್ ಗಾತ್ರದ ಹಾಗೂ ತೆಳುವಾದ ಶರೀರ; ನುಣುಪಾದ ಮಾಸಲು ಹುರುಪೆಗಳು ; ಚೂಪಾದ ತಲೆ ಮತ್ತು ಹೊಳೆಯುವ ಹಸಿರು ಬಣ್ಣದ ಶರೀರ.

**ಸರಾಸರಿ ಉದ್ದ:** 1 ಮೀ. ; **ಹುಟ್ಟಿದಾಗ:** 20 ಸೆಂ.ಮೀ. ; **ಗರಿಷ್ಠ:** 2 ಮೀ. (ಹೆಣ್ಣು)

**ವಿವರಣೆ:** ಹಸಿರು ಹಾವುಗಳು ತೆಳುವಾದ ಹಾಗೂ ಉದ್ದವಾದ ಶರೀರ ಮತ್ತು ತುಂಬ ಚೂಪಾದ ತಲೆಯನ್ನು ಪಡೆದಿವೆ. ಇಡೀ ಶರೀರವು ಗಿಳಿ ಹಸಿರು ಬಣ್ಣದ್ದು. ಕೆಲವೊಮ್ಮೆ ಉದರದ ಹುರುಪೆಗಳು ಹಾಗೂ ಬೆನ್ನಿನ ಹುರುಪೆಗಳ ಮಧ್ಯೆ ತೆಳುವಾದ ಬಿಳುಪು ಅಥವಾ ಹಳದಿ ರೇಖೆಯಿರಬಹುದು. ಸಮುದ್ರ ಮಟ್ಟದಿಂದ ಸುಮಾರು 2300 ಮೀಟರುಗಳಷ್ಟು ಎತ್ತರವಿರುವ ದಕ್ಷಿಣ ಭಾರತದ ಬೆಟ್ಟದ ಸಾಲುಗಳಲ್ಲಿ ವಾಸಿಸುವ ಹಸಿರು ಹಾವಿನ ವಿಧವೊಂದರಲ್ಲಿ ಗುಲಾಬಿ ಕೆಂಪು ಬಣ್ಣದ ರೇಖೆಯಿದೆ. ಶರೀರದ ತಳಭಾಗವು ತಿಳಿ ಹಸಿರು ಅಥವಾ ಹಳದಿಯಿರುತ್ತದೆ. ಉದ್ವೇಗಗೊಂಡಾಗ, ಈ ಹಾವಿನ ಶರೀರ ಮತ್ತು ಕುತ್ತಿಗೆ ದೊಡ್ಡದಾಗಿ ಹುರುಪೆಗಳ ನಡುವಿನ ಕಪ್ಪು ಮತ್ತು ಬಿಳಿಯ ಬಣ್ಣ ಕಂಡುಬರುತ್ತದೆ. ಅದರಿಂದಾಗಿ ಶರೀರದಲ್ಲಿ ಬಣ್ಣದ ಅಡ್ಡಪಟ್ಟಿಗಳಿರುವಂತೆ ಕಾಣುತ್ತದೆ. ಹುರುಪೆಗಳು ನುಣುಪಾಗಿವೆ, ಆದರೆ ಹೊಳೆಯುವುದಿಲ್ಲ. ನೆಟ್ಟಗೆ ಅಂಡಾಕಾರವಾಗಿರುವ ಇವುಗಳ ಕಣ್ಣು ಅತ್ಯಂತ ವಿಶಿಷ್ಟವಾದುದು. ಹಸಿರು ಹಾವುಗಳು ಸಾಮಾನ್ಯವಾದ ಹಾವುಗಳಾದರೂ ಅವುಗಳ ಮೈಬಣ್ಣ ಪರಿಸರದೊಂದಿಗೆ ಮಿಳಿತವಾಗುವುದರಿಂದ ಕಣ್ಣಿಗೆ ಕಾಣಿಸುವುದು ಅಪರೂಪ.

**ವಿತರಣೆ :** ಈ ಹಾವುಗಳು ಆಗ್ನೇಯ ಭಾರತ ಹಾಗೂ ಗಂಗಾನದಿಯ ಪಾತ್ರಗಳ ಹೊರತಾಗಿ ಸಮುದ್ರ ಮಟ್ಟದಿಂದ 2500 ಮೀಟರುಗಳ ಎತ್ತರದವರೆಗೂ ಇರುವ ಭಾರತದ ಎಲ್ಲ ಪ್ರದೇಶಗಳಲ್ಲಿಯೂ ಕಂಡುಬರುತ್ತವೆ.

**ಆವಾಸ:** ಈ ಹಾವಿನ ವಾಸ ಮೈದಾನದ ಚಿಕ್ಕ ಪೊದೆಗಳು ಮತ್ತು ಮರಗಳಿಂದ ಹಿಡಿದು ಪರ್ವತಗಳಲ್ಲಿ ಅತಿ ದೊಡ್ಡ ಮಳೆಯ ಕಾಡಿನ ಮರಗಳವರೆಗೆ ವ್ಯಾಪಿಸಿದೆ.

**ಸ್ವಭಾವ :** ಬೇರೆಯವರ ಕಣ್ಣಿನಿಂದ ತಪ್ಪಿಸಿಕೊಳ್ಳಲು ಹಸಿರು ಹಾವುಗಳು, ತಮ್ಮ ಈ ಆಕಾರ ಮತ್ತು ಬಣ್ಣವನ್ನು ಅವಲಂಬಿಸಿವೆ. ಅವು ಸಾಕಷ್ಟು ವೇಗದಲ್ಲಿ ಚಲಿಸಬಲ್ಲವು. ಕೆಣಕಿದಾಗ ಬಾಯಿಯನ್ನು ಅಗಲವಾಗಿ ತೆರೆಯುತ್ತವೆ ಮತ್ತು ಶರಿರವನ್ನು ದೊಡ್ಡದಾಗಿ ಹಿಗ್ಗಿಸಿಕೊಳ್ಳುತ್ತವೆ. ಹಸಿರು ಹಾವುಗಳಿಗೆ ಹಿಂದವಡೆಯಲ್ಲಿ ವಿಷದಂತಗಳಿವೆ. ಲಘುವಾದ ಪರಿಣಾಮ ಬೀರುವ ವಿಷದಿಂದ ಈಡುಜೀವಿಗಳು ಸಾಯುವವರೆಗೂ ಅವನ್ನು ಈ ಹಾವುಗಳು ಬಾಯಿಯಲ್ಲಿ ಹಿಡಿದುಕೊಂಡಿರುತ್ತವೆ. ಬೆದೆಯ ಕಾಲದಲ್ಲಿ ಈ ಹಾವುಗಳು ಗುಂಪುಗಳಲ್ಲಿ ಒಂದಕ್ಕೊಂದು ಸುತ್ತಿಕೊಂಡು, ಒಮ್ಮೊಮ್ಮೆ ಗೊಂಚಲುಗಳಂತೆ ಮರದ



ಹಸಿರು ಹಾವು

ರೆಂಬೆಗಳಿಗೆ ನೇತುಹಾಕಿಕೊಂಡಿರುವುದನ್ನು ನೋಡಬಹುದು.

**ಸಂತಾನ :** ಚೆನ್ನೈ ಪ್ರದೇಶದ ಹಸಿರು ಹಾವುಗಳು ಆಗಸ್ಟ್–ನವಂಬರ್ ತಿಂಗಳುಗಳಲ್ಲಿ ಸುಮಾರು 8 ಮರಿಗಳನ್ನು ಹಾಕುತ್ತವೆ. ಮರಿಹಾವುಗಳು ತಂದೆ – ತಾಯಿಗಳ ಪಡಿಯಚ್ಚಿನಂತಿರುತ್ತವೆ. ಆದರೆ ಮೂಗು ಸ್ವಲ್ಪ ಮೇಲೆತ್ತಿಕೊಂಡಿರುತ್ತದೆ.

**ಆಹಾರ :** ಹಲ್ಲಿ, ಕಪ್ಪೆ, ಇಲಿ ಮತ್ತು ಸಣ್ಣಪುಟ್ಟ ಪಕ್ಷಿಗಳು, ಹಸಿರು ಹಾವುಗಳ ಮುಖ್ಯ ಆಹಾರ. ಈ ಹಾವುಗಳು ಮೀನುಗಳನ್ನು ಹಿಡಿದು ನುಂಗುವುದು ಶ್ರೀಲಂಕಾದಿಂದ ವರದಿಯಾಗಿದೆ. ಕವಚ ಬಾಲದ ಹಾವೊಂದನ್ನು ಹಸಿರು ಹಾವು ನುಂಗುವುದನ್ನು ನಾವು ನೋಡಿದ್ದೇವೆ.

**ಪರಿಸ್ಥಿತಿ :** ಸಾಮಾನ್ಯ ಹಾವೆಂದು ಪರಿಗಣಿಸಲಾಗಿದೆ. ಈ ಹಾವಿನ ಬಗ್ಗೆ ಜನರಿಗೆ ತುಂಬ ಭಯವಿದ್ದು ನೋಡಿದ ತಕ್ಷಣ ಕೊಲ್ಲುತ್ತಾರೆ. ಈ ಹಾವು ಮನುಷ್ಯನ ಕಣ್ಣನ್ನು ಕುಕ್ಕಿ ಹೊರ ತೆಗೆಯುತ್ತದೆಂದು ಕೆಲವು ಕಡೆ ತಪ್ಪಾಗಿ ತಿಳಿದಿದ್ದಾರೆ.

*ನಿರುಪದ್ರವಿ*

# 19. ಸಾಮಾನ್ಯ ಬೆಕ್ಕುಹಾವು

*ಬೊಯಿಗ ಟ್ರೈಗೊನಾಟ (Boiga trigonata)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದರಿಂದ ಮಧ್ಯಮ ಗಾತ್ರದ ಹಾಗೂ ತುಂಬ ತೆಳುವಾದ ಶರೀರ ; ನುಣುಪಾದ ಹುರುಪೆಗಳು ; ತುಂಬ ತೆಳುವಾದ ಕುತ್ತಿಗೆ ; ಹೊರಚಾಚಿರುವ ಕಣ್ಣುಗಳು ; ಚಪ್ಪಟೆಯಾದ ತಲೆ ಮತ್ತು ಶರೀರದ ಮೇಲೆ ಬಣ್ಣದ ವಿಶಿಷ್ಟವಾದ ವಿನ್ಯಾಸ. ಸರಾಸರಿ ಉದ್ದ: 65 ಸೆಂ.ಮೀ. ; ಹುಟ್ಟಿದಾಗ : 25 ಸೆಂ.ಮೀ ; ಗರಿಷ್ಠ : 1.25 ಮೀ. (ಹೆಣ್ಣು).

**ವಿವರಣೆ :** ಸಾಮಾನ್ಯ ಬೆಕ್ಕುಹಾವಿಗೆ ತೆಳುವಾದ ಹಾಗೂ ನೀಳವಾದ ಶರೀರ ಮತ್ತು ಚಾಟಿಯಂತೆ ಚೂಪಾದ ತುದಿಯಿರುವ ಬಾಲವಿದೆ. ಶರೀರಕ್ಕೆ ತಿಳಿ ಹಳದಿ ಅಥವಾ ಹದಮಾಡಿದ ಚರ್ಮದ ಬಣ್ಣವಿದೆ. ಅಲ್ಲದೆ ಅದರ ಮೇಲೆ ದಟ್ಟವಾದ ಅಡ್ಡಾದಿಡ್ಡಿಯಾದ ಗುರುತುಗಳಿವೆ. ತಲೆಯ ಮೇಲೆ ಸ್ಪಷ್ಟವಾದ 'Y' ಆಕಾರದ ಗುರುತಿದೆ. ಶರೀರದ ಕೆಳಭಾಗವು ಬಿಳುಪು ಅಥವಾ ಕಂದು ಬಣ್ಣ ಹೊಂದಿರುತ್ತದೆ. ಕೆಲವೊಮ್ಮೆ ಉದರದ ಪ್ರತಿ ಹುರುಪೆಯ ಮೆಲೆ ಸಣ್ಣ ಚುಕ್ಕೆಗಳಿರುತ್ತವೆ. ಹುರುಪೆಗಳು ನುಣುಪಾಗಿರುತ್ತವೆ ; ಆದರೆ ಹೊಳೆಯುತ್ತಿರುವುದಿಲ್ಲ. ಸಾಮಾನ್ಯ ಬೆಕ್ಕುಹಾವುಗಳನ್ನು ಅನೇಕ ವೇಳೆ ಗರಗಸ ಹುರುಪೆಗಳಿರುವ ಮಂಡಲ ಹಾವುಗಳೆಂದು ತಪ್ಪಾಗಿ ತಿಳಿಯುವುದುಂಟು. ಮಹಾರಾಷ್ಟ್ರದ ಹಾವು ಹಿಡಿಯುವ ಮಹರ್ ಜನರು ಇವನ್ನು 'ಗರಗಸ ಹುರುಪೆಗಳಿರುವ ಉದ್ದನೆಯ ಹಾವು'ಗಳೆಂದು ಕರೆಯುತ್ತಾರೆ. ಮಂಡಲ ಹಾವುಗಳಿಗೆ



ಸಾಮಾನ್ಯ ಬೆಕ್ಕುಹಾವು

ಹೋಲಿಸಿದರೆ, ಬೆಕ್ಕುಹಾವುಗಳು ಉದ್ದ ಹಾಗೂ ತೆಳುವಾಗಿರುತ್ತವೆ. ಭಾರತದಲ್ಲಿ ಬೆಕ್ಕು ಹಾವುಗಳ 11 ಪ್ರಭೇದಗಳಿವೆ. ಸಾಮಾನ್ಯ ಬೆಕ್ಕುಹಾವನ್ನು ಬಿಟ್ಟರೆ ಮಿಕ್ಕ ಬಹುತೇಕ ಪ್ರಭೇದಗಳು ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತವೆ. ಅವುಗಳಲ್ಲಿ ಫೊರ್ಸ್ಟೆನ್ ಬೆಕ್ಕುಹಾವು 2 ಮೀಟರುಗಳವರೆಗೂ ಬೆಳೆಯಬಲ್ಲುದು. ಮತ್ತೊಂದು ಪ್ರಭೇದವಾದ ಅಂಡಮಾನ್ ಬೆಕ್ಕುಹಾವು ಕೇವಲ ಅಂಡಮಾನ್ ಮತ್ತು ನಿಕೋಬಾರ್‌ಗಳಲ್ಲಿ ಜೀವಿಸುತ್ತದೆ.

**ವಿತರಣೆ :** ಭಾರತದಾದ್ಯಂತ ಬಹುತೇಕ ಮೈದಾನ ಪ್ರದೇಶಗಳಲ್ಲಿ ಕಂಡುಬರುತ್ತದೆ. ಹಿಮಾಲಯದ ಬೆಕ್ಕುಹಾವು ಸಮುದ್ರ ಮಟ್ಟದಿಂದ 3000 ಮೀಟರುಗಳ ಎತ್ತರದವರೆಗೂ ಕಂಡುಬರುತ್ತದೆ.

**ಆವಾಸ :** ತಮಿಳಿನಲ್ಲಿ ಸಾಮಾನ್ಯ ಬೆಕ್ಕುಹಾವುಗಳನ್ನು 'ತೆಂಗಿನಗರಿ ಹಾವು'ಗಳೆಂದು ಕರೆಯುತ್ತಾರೆ. ಏಕೆಂದರೆ ಬೆಳಗಿನ ಹೊತ್ತು ಈ ಹಾವುಗಳು ಸಾಮಾನ್ಯವಾಗಿ ತೆಂಗಿನಮರದ ಗರಿಗಳಿಗೆ ಸುತ್ತಿಕೊಂಡಿರುತ್ತವೆ. ಇವು ತಂಪಾದ ಪೊದೆಗಳಲ್ಲಿ, ತೆಂಗಿನಗರಿಗಳ ಛಾವಣಿಗಳಲ್ಲಿ ಅಥವಾ ಮರಗಳ ತೊಗಟೆಗಳ ಕೆಳಗಡೆ ಬೆಳಗಿನ ವೇಳೆಯನ್ನು ಕಳೆಯುತ್ತವೆ.

**ಸ್ವಭಾವ :** ಈ ಹಾವಿಗಿರುವ ಬೆಕ್ಕಿನಂತಹ ಹೊರಚಾಚಿರುವ ಕಣ್ಣುಗಳು ಮತ್ತು ಪುಕ್ಕದಂತಹ ಉದ್ದನೆಯ ನಾಲಿಗೆಯು, ಈ ಹಾವು ನಿಶಾಚರಿಯೆಂಬುದನ್ನು ಸೂಚಿಸುತ್ತವೆ. ಇವಕ್ಕೆ ಹಿಂದವಡೆಯಲ್ಲಿ ವಿಷದಂತಗಳಿವೆ ಮತ್ತು ಅವುಗಳಲ್ಲಿರುವ ಲಘು ಪರಿಣಾಮ ಬೀರುವ ವಿಷವು ಚಿಕ್ಕಪುಟ್ಟ ಈಡುಜೀವಿಗಳನ್ನು ನಿಶ್ಚೇಷ್ಟಿತಗೊಳಿಸುತ್ತದೆ. ಈ ಹಾವುಗಳು ಆಕ್ರಮಣಕಾರಿಗಳಲ್ಲ. ಅವಕ್ಕೆ ತೊಂದರೆಯಾದಾಗ ಭದ್ರವಾಗಿ ಸುತ್ತಿಕೊಂಡು ಶರೀರವನ್ನು ಹಿಂಚಾಚಿ ಹಾಗೂ ಬಾಲವನ್ನು ಅಲುಗಾಡಿಸುತ್ತಾ ರಕ್ಷಣೆಗೆ ಸಿದ್ಧವಿರುವಂತೆ ಪ್ರದರ್ಶಿಸುತ್ತವೆ. ಇವನ್ನು ತಿವಿದಾಗ ಕೆಲವೊಮ್ಮೆ ತಲೆಕೆಳಗಾಗಿ ಬಿದ್ದು ಸತ್ತಂತೆ ನಟಿಸುತ್ತವೆ.

**ಸಂತಾನ :** ಚೆನ್ನೈನ ಸರ್ಪವನದಲ್ಲಿರುವ ಸಾಮಾನ್ಯ ಬೆಕ್ಕುಹಾವು ಅಕ್ಟೋಬರ್ 20 ರಂದು 7 ಮೊಟ್ಟೆಗಳನ್ನಿಟ್ಟಿತು.

**ಆಹಾರ :** ಮರದ ಹಲ್ಲಿಗಳು ಹಾಗೂ ಇತರ ಹಲ್ಲಿಗಳು ಈ ಹಾವಿನ ಆಹಾರ. ಅಲ್ಲದೆ ಈ ಹಾವುಗಳು ಇಲಿ ಮತ್ತು ಸಣ್ಣಪುಟ್ಟ ಪಕ್ಷಿಗಳನ್ನೂ ತಿನ್ನುತ್ತವೆ.

**ಪರಿಸ್ಥಿತಿ :** ಈ ಹಾವನ್ನು ದಕ್ಷಿಣ ಭಾರತದ ಬಹುತೇಕ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಹಾವೆಂದು ಪರಿಗಣಿಸಬಹುದು. ಆದರೆ ಇತರೆ ನಿಶಾಚರಿಗಳಂತೆ ಅಥವಾ ಗಮನ ಸೆಳೆಯದ ಹಾವುಗಳಂತೆ, ಈ ಹಾವು ತುಂಬ ಅಪರೂಪಕ್ಕೆ ಕಣ್ಣಿಗೆ ಬೀಳುತ್ತದೆ.

# 20. ನಾಯಿ ಮುಖದ ನೀರುಹಾವು

*ಸೆರ್ಬೆರಸ್ ರಿಂಕೋಪ್ಸ್(Cerberus rhynchops)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಹಾಗೂ ಅಗಲವಾದ ಶರೀರ ; ಏಣುಗಳಿರುವ ಹಾಗೂ ಮಬ್ಬಾದ ಹುರುಪೆಗಳು ; ಶಿರಕ್ಕಿಂತ ತಲೆ ಅಗಲ ; ಸಣ್ಣ ಕಣ್ಣುಗಳು ; ಅಸ್ಪಷ್ಟವಾದ ಶರೀರದ ಮೇಲ್ಭಾಗದ ಬಣ್ಣಗಳ ವಿನ್ಯಾಸ ; ಉದರ ಭಾಗದಲ್ಲಿ ವಿಶಿಷ್ಟವಾದ ಚೌಕಳಿಗಳ ನಮೂನೆ.

**ಸರಾಸರಿ ಉದ್ದ :** 60 ಸೆಂ.ಮೀ. ; ಗರಿಷ್ಠ: 1.25 ಮೀ. (ಹೆಣ್ಣು).

**ವಿವರಣೆ :** ನಾಯಿ ಮುಖದ ನೀರುಹಾವು ತಲೆಯ ಮೇಲ್ಭಾಗದಲ್ಲಿ ಕಣ್ಣು ಮತ್ತು ಮೂಗಿನ ಹೊಳ್ಳೆಗಳನ್ನು ಹೊಂದಿರುವ ದಪ್ಪ ಶರೀರದ ಸರ್ಪ. ಹಾವಿನ ಒಟ್ಟಾರೆ ಬಣ್ಣ ಬಳಪದ ಕಲ್ಲಿನಂತೆ ಬೂದು ಬಣ್ಣ. ಶರೀರದ ಮೇಲೆ ಕೆಲವೊಮ್ಮೆ ಅಸ್ಪಷ್ಟವಾದ ಹಾಗೂ ಅಸಮವಾದ ಕಪ್ಪುಬಣ್ಣದ ಅಡ್ಡ ಪಟ್ಟೆಗಳಿರುತ್ತವೆ. ಕಪ್ಪುರೇಖೆಗಳು ಕಣ್ಣಿನಿಂದ ಪ್ರಾರಂಭಿಸಿ ಶರೀರದ ಹಿಂಭಾಗಕ್ಕೆ ಹರಡಿಕೊಂಡಿರುತ್ತವೆ. ಉದರ ಭಾಗವು ಕಪ್ಪು ಮತ್ತು ಬಿಳಿಯ ಬಣ್ಣದ ವಿಶಿಷ್ಟವಾದ ಚೌಕಳಿಗಳನ್ನು ಹೊಂದಿರುತ್ತದೆ. ಹುರುಪೆಗಳು ಮಬ್ಬಾಗಿವೆ ಹಾಗೂ ಬಲವಾದ ಏಣುಗಳನ್ನು ಪಡೆದಿವೆ. ಜೌಗುಪ್ರದೇಶದಲ್ಲಿ ವಾಸಿಸುವ ಮತ್ತು ಹಿಂದವಡೆಯಲ್ಲಿ ವಿಷದಂತಗಳಿರುವ ಸರ್ಪಗಳ ಆರು ಪ್ರಭೇದಗಳು ಭಾರತದಲ್ಲಿವೆ.

**ವಿತರಣೆ :** ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳೂ ಸೇರಿದಂತೆ ಭಾರತದಲ್ಲಿನ ಕಡಲತೀರದ ಪ್ರದೇಶಗಳು.

**ಆವಾಸ :** ಮ್ಯಾಂಗ್ರೋವ್ (ಅಳಿವೆ) ಜೌಗುಗಳಂತಹ ಕೆಸರು ಮತ್ತು ಕಲ್ಲುಗಳಿಂದ ಕೂಡಿದ ಅಳಿವೆ ಪ್ರದೇಶಗಳು ; ಸಮುದ್ರದಿಂದ ಉಪ್ಪು ಪಡೆಯುವ ಪ್ರದೇಶಗಳು ಮತ್ತು ಕೊರಕಲುಗಳು. ಈ ಹಾವುಗಳಿಗೆ ಅಳಿವೆ ಪ್ರದೇಶದ ನೀರು ಇಷ್ಟವಾದರೂ ಕರಾವಳಿಯಿಂದ ಹಲವಾರು ಮೈಲು ದೂರದ ಭತ್ತದ ಗದ್ದೆಗಳಲ್ಲೂ ಇವು ಬಲೆಗಳಿಗೆ ಸಿಕ್ಕಿಕೊಂಡದ್ದಿದೆ.

**ಸ್ವಭಾವಗಳು:** ನಾಯಿ ಮುಖದ ನೀರುಹಾವುಗಳು ಪ್ರಧಾನವಾಗಿ ನಿಶಾಚರಿಗಳು. ಆದರೆ ಇವು ಬೆಳಗಿನ ವೇಳೆಯೂ ಆಹಾರ ಗಳಿಸುವುದನ್ನು ಮತ್ತು ಗಂಡು-ಹೆಣ್ಣು ಕೂಡುವುದನ್ನು ಗಮನಿಸಲಾಗಿದೆ. ಕಡಲ ತೀರದಲ್ಲಿನ ಕಲ್ಲು ಬಂಡೆಗಳ ಕೆಳಗೆ ಹಾಗೂ ಏಡಿಗಳ ಬಿಲಗಳಲ್ಲಿ ವಾಸಿಸುವ ಈ ಹಾವುಗಳು ತಮ್ಮ ತಲೆ ಹೊರಚಾಚುವುದನ್ನು ಸಹ ಗಮನಿಸಲಾಗಿದೆ. ನೀರಿನ ತಳಭಾಗದಲ್ಲಿ ಈಜುವಾಗ ಹಾವಿನ ಉದ್ದನೆಯ ನಾಲಿಗೆಯು ಹೊರಚಾಚಿಕೊಂಡಿರುತ್ತದೆ. ಈ ಹಾವು ಅತ್ಯುತ್ತಮ ಹಾಗೂ ಶೀಘ್ರ ಈಜುಗಾರ. ನೆಲದ ಮೇಲಿದ್ದಾಗ ಹೆದರಿಸಿದರೆ ಜಿಗಿಯುತ್ತಾ ಆಚೀಚೆ ಶರೀರವನ್ನು ಹೊರಳಿಸುತ್ತಾ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತದೆ.

**ಹರೆಯ :** ಈ ಹಾವು ಫೆಬ್ರವರಿ-ಮೇ ತಿಂಗಳುಗಳ ನಡುವೆ 6 ರಿಂದ 30 ಮರಿಹಾವುಗಳಿಗೆ ಜನ್ಮ ನೀಡುತ್ತದೆ. ಮರಿಹಾವುಗಳು ಒಂದು ವಾರ ಅಥವಾ ಅದಕ್ಕಿಂತ

ಸ್ವಲ್ಪ ಹೆಚ್ಚಿನ ದಿನಗಳ ಕಾಲ ಒಟ್ಟಿಗೆ ಜೀವಿಸುತ್ತವೆ. ತಾಯಿ ಹಾವು ಬಹುತೇಕ ಮರಿಗಳ ಸಮೀಪವಿರುತ್ತದೆ.

**ಆಹಾರ :** ಈ ಹಾವು ಪ್ರಮುಖವಾಗಿ ಟಿಲಾಪಿಯ(ಜಿಲೇಬಿ ಮೀನು) ಮತ್ತು ಬೆಕ್ಕು ಮೀನುಗಳು ಸೇರಿದಂತೆ ವಿವಿಧ ಪ್ರಭೇದಗಳ ಮುಳ್ಳು ಮೀನುಗಳನ್ನು ತಿನ್ನುತ್ತದೆ. ಅಲ್ಲದೆ ಕಪ್ಪೆಗಳನ್ನು ಸಹ ತಿನ್ನುತ್ತದೆ.

**ಪರಿಸ್ಥಿತಿ :** ನಾಯಿ ಮುಖದ ನೀರುಹಾವು ವಿನಾಶದಿಂದ ತಪ್ಪಿಸಿಕೊಂಡಿದ್ದರೂ, ಕರಾವಳಿ ಪರಿಸರದ ನಾಶ ಹಾಗೂ ಅಳಿವೆ ಪ್ರದೇಶಗಳಲ್ಲಿನ ಮಾಲಿನ್ಯದಿಂದ ಅನೇಕ ದುಷ್ಪರಿಣಾಮಗಳಿಗೆ ಒಳಗಾಗಿದೆ. ಎಂ. ಎ. ಸ್ಮಿತ್ ಅವರು ಈ ಹಾವನ್ನು ಅಪರೂಪದ ಹಾವೆಂದು ಪರಿಗಣಿಸಿದ್ದಾರೆ. ವಾಸ್ತವವಾಗಿ ಇದು ಭಾರತದಲ್ಲಿ ಹೇರಳವಾಗಿರುವ ಹಾವು.



ಸಾಮಾನ್ಯ ಕಡಂಬಳ

# 21. ಸಾಮಾನ್ಯ ಕಡಂಬಳ

*ಬಂಗಾರಸ್ ಸೀರುಲಿಯಸ್ (Bungarus Caeruleus)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಶರೀರ, ನುಣುಪಾದ ಹೊಳೆಯುವ ಹುರುಪೆಗಳು ; ಕುತ್ತಿಗೆಗಿಂತ ಸ್ವಲ್ಪ ಅಗಲವಾದ ತಲೆ ; ಸಾಮಾನ್ಯವಾಗಿ ಬಿಳುಪಿನ ವಿಶಿಷ್ಟವಾದ ಅಡ್ಡಗೆರೆಗಳಿರುವ ಕಡುಗಪ್ಪು ಬಣ್ಣ.

**ಸರಾಸರಿ ಉದ್ದ :** 1 ಮೀ ; ಹುಟ್ಟಿದಾಗ : 25 ಸೆಂ.ಮೀ ; ಗರಿಷ್ಠ : 1.75 ಮೀ. (ಗಂಡು).

**ವಿವರಣೆ :** ಸಾಮಾನ್ಯ ಕಡಂಬಳಗಳು ನುಣುಪಾದ, ಹೊಳೆಯುವ ನೀಲಿಕಪ್ಪು ಬಣ್ಣದ ಹಾವುಗಳಾಗಿದ್ದು, ಕುತ್ತಿಗೆಗಿಂತ ಸ್ಪಷ್ಟವಾಗಿ ದುಂಡಗಿರುವ ತಲೆಯನ್ನು ಹೊಂದಿವೆ. ಶರೀರದ ಬಣ್ಣದಲ್ಲಿ ಆಗ ತಾನೆ ಪೊರೆಬಿಟ್ಟ ಕಡಂಬಳದ ಗಾಢನೀಲಿ ಕಪ್ಪು ಬಣ್ಣದಿಂದ ಹಿಡಿದು ಮಾಸಲು ನೀಲಿಯುತ ಬೂದು ಬಣ್ಣದವರೆಗೆ ವ್ಯತ್ಯಾಸವಿರುತ್ತದೆ. ಅಂದಾಜು 40 ತೆಳುವಾದ ಬಿಳಿಯ ಅಡ್ಡಗೆರೆಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಹರೆಯದ ಹಾಗೂ ಕೆಲವು ಪ್ರೌಢ ಕಡಂಬಳಗಳಲ್ಲಿ ಅಡ್ಡಗೆರೆಗಳ ಬದಲು ಬಿಳಿಯ ಚುಕ್ಕೆಗಳು, ಶರೀರದ ಮೊದಲ ಮೂರನೆ ಒಂದು ಭಾಗದಲ್ಲಿ ಕಂಡುಬರಬಹುದು. ಕೆಲವು ಪ್ರದೇಶಗಳಲ್ಲಿನ ಹಾವುಗಳಲ್ಲಿ ಈ ರೀತಿಯ ವ್ಯತ್ಯಾಸ ಕಂಡುಬರುತ್ತದೆ. ಶರೀರದ ತಳಭಾಗವು ಬಿಳುಪಾಗಿರುತ್ತದೆ. ಅನೇಕ ವೇಳೆ ಕಡಂಬಳಗಳನ್ನು ತೋಳದ ಹಾವುಗಳೆಂದು (ಲೈಕೊಡಾನ್ ಪ್ರಭೇದ) ತಪ್ಪಾಗಿ ತಿಳಿಯುವುದುಂಟು. ಆದರೆ ಕಡಂಬಳಗಳಿಗಿಂತ ತೋಳದ ಹಾವುಗಳು ಗಾತ್ರದಲ್ಲಿ ಸಾಕಷ್ಟು ಚಿಕ್ಕವು. ಅಲ್ಲದೆ ತಲೆಯು ಚಪ್ಪಟೆ ಹಾಗೂ ಸ್ವಲ್ಪ ಚೂಪಾಗಿರುತ್ತದೆ. ಭಾರತದಲ್ಲಿರುವ ಕಡಂಬಳಗಳ 6 ಪ್ರಭೇದಗಳಲ್ಲಿ ಸಾಮಾನ್ಯ ಕಡಂಬಳವು ಅತ್ಯಂತ ಪರಿಚಿತ ಹಾವು. ಭಾರತದ ನಾಲ್ಕು ದೊಡ್ಡ ವಿಷಕಾರಿ ಹಾವುಗಳಲ್ಲಿ ಸಾಮಾನ್ಯ ಕಡಂಬಳವೂ ಒಂದು. ಸಾಮಾನ್ಯ ಹಾಗೂ ಪಟ್ಟೆಗಳ ಕಡಂಬಳಗಳನ್ನು ಬಿಟ್ಟರೆ ಮಿಕ್ಕ ಕಡಂಬಳಗಳು ಅಪರೂಪ ಮತ್ತು ಪೂರ್ವ ಭಾಗದ ಹಿಮಾಲಯ ಪ್ರದೇಶಗಳಿಗೆ ಮತ್ತು ಅಸ್ಸಾಂ ರಾಜ್ಯಕ್ಕೆ ಸೀಮಿತವಾಗಿವೆ.

**ವಿತರಣೆ :** ಅಂಡಮಾನ್ ಮತ್ತು ನಿಕೋಬಾರ್‌ಗಳನ್ನು ಒಳಗೊಂಡಂತೆ ಭಾರತದ ಬಹಳಷ್ಟು ಪ್ರದೇಶಗಳು; ಸಮುದ್ರ ಮಟ್ಟದಿಂದ 1700 ಮೀ. ಎತ್ತರದವರೆಗೆ. ಪಟ್ಟೆಗಳ ಕಡಂಬಳ ಕಂಡುಬರುವ ಬಂಗಾಳ, ಅಸ್ಸಾಂ ಮತ್ತು ಒರಿಸ್ಸಾಗಳಲ್ಲಿ ಸಾಮಾನ್ಯ ಕಡಂಬಳ ಅಪರೂಪವಾಗಿ ಕಂಡುಬರುತ್ತದೆ.

**ಆವಾಸ :** ಸಾಮಾನ್ಯ ಕಡಂಬಳಗಳು ಜೀವಿಸುವ ಅತಿ ಮುಖ್ಯ ಪ್ರದೇಶಗಳೆಂದರೆ ಮರಳು ಮಿಶ್ರಿತ ಮಣ್ಣು, ಹುತ್ತಗಳು, ಪುಟ್ಟ ದಂಶಕಗಳ ಬಿಲಗಳು ಮತ್ತು ಇಟ್ಟಿಗೆ ಹಾಗೂ ಕಸಕಡ್ಡಿಯಿರುವ ಗುಡ್ಡೆಗಳು. ಇವು ಪ್ರಧಾನವಾಗಿ ಮೈದಾನ ಪ್ರದೇಶದಲ್ಲಿ ಜೀವಿಸುವ ಹಾವುಗಳು. ಈ ಹಾವು ಭಾರತದ ಕೆಲವು ಪ್ರದೇಶಗಳಲ್ಲಿ (ತಮಿಳುನಾಡಿನ

ಕಡಲ ಪ್ರದೇಶಗಳಲ್ಲಿರುವಂತೆ) ತುಂಬ ಸಾಮಾನ್ಯ ಪ್ರಾಣಿಯಾದರೂ ಕಣ್ಣಿಗೆ ಬೀಳುವುದು ಅಪರೂಪ.

**ಸ್ವಭಾವಗಳು :** ಬೆಳಗಿನ ಹೊತ್ತು ಇವು ತಮ್ಮ ಆದ್ರ್ಯತೆಯ ಸ್ಥಳಗಳಾದ ಬಯಲಿಲಿ(Musbooduga) ಮತ್ತು ಹೆಗ್ಗಣಗಳ(Rattus meltada) ಬಿಲಗಳಲ್ಲಿ ಅಡಗಿಕೊಂಡಿರುತ್ತವೆ. ಕಡಂಬಳಗಳು ನಿಶಾಚರಿಗಳಾಗಿದ್ದು ಬೆಳಗಿನ ವೇಳೆ ಕಾಣಸಿಗುವುದಿಲ್ಲ. ಗಂಡು ಕಡಂಬಳಗಳಿಗೆ ವರ್ಷದ ಬಹಳಷ್ಟು ಕಾಲದಲ್ಲಿ ಗಡಿ ಮತ್ತು/ಅಥವಾ ಲಿಂಗ ಪ್ರಜ್ಞೆ ಇರುವಂತೆ ಕಾಣುತ್ತದೆ. ಹಲವಾರು ಹಾವುಗಳಿರುವ ಬೋನಿನೊಳಕ್ಕೆ ಗಂಡು ಕಡಂಬಳ ಹಾವನ್ನು ಬಿಟ್ಟರೆ ಅನೇಕ ವೇಳೆ ಅತ್ತಿತ್ತ ಓಲಾಡುತ್ತ 'ಕುಣಿತ' ಆರಂಭಿಸುತ್ತದೆ. ಕೆಲವು ವೇಳೆ ಈ ಕುಣಿತ ತೀವ್ರ ಸೆಣೆಸಾಟದ ಕಚ್ಚಾಟದಲ್ಲಿ ಕೊನೆಗೊಳ್ಳುತ್ತದೆ. ಕಡಂಬಳಗಳು ಚಿಕ್ಕದಾದ ವಿಷದಂತಗಳುಳ್ಳ ಹಾವುಗಳಾಗಿದ್ದು, ಬಲವಾದ ಹಿಡಿತವನ್ನು ಸಾಧಿಸಬಲ್ಲವು. ಇವು ಶೀಘ್ರಗಾಮಿಗಳು ಮತ್ತು ರಾತ್ರಿಯ ವೇಳೆ ಚಟುವಟಿಕೆಯಿಂದಿರುತ್ತವೆ.

**ಸಂತಾನ :** ಚೆನ್ನೈನಲ್ಲಿ ಹೆಣ್ಣು ಹಾವು ಮಾರ್ಚ್ ಮತ್ತು ಮೇ ತಿಂಗಳುಗಳ ನಡುವೆ 8 ರಿಂದ 12 ಮೊಟ್ಟೆಗಳನ್ನಿಡುತ್ತದೆ. ಆ ಮೊಟ್ಟೆಗಳು ಮೇನಿಂದ ಜುಲೈ ತಿಂಗಳುಗಳಲ್ಲಿ ಒಡೆದು ಮರಿಗಳು ಹೊರಬರುತ್ತವೆ. ಉತ್ತರ ಭಾರತದ ಹಾವುಗಳು ಒಂದು ತಿಂಗಳು ತಡವಾಗಿ ಮೊಟ್ಟೆಗಳನ್ನಿಡುತ್ತವೆ. ಮೊಟ್ಟೆಗಳಿಗೆ ಕಾವು ಕೊಡುವ ಕಾಲದಲ್ಲಿ ನಾಗರಹಾವು ಹಾಗೂ ಇತರೆ ಹಾವುಗಳು ರಕ್ಷಣೆ ನೀಡುವಂತೆ, ಕಡಂಬಳವೂ ಮೊಟ್ಟೆಗಳ ಸಮೀಪವೇ ಇರುತ್ತದೆ.

**ಆಹಾರ :** ಪ್ರಧಾನವಾಗಿ ಹಾವು, ಹಲ್ಲಿ ಹಾಗೂ ದಂಶಕಗಳು. ನರಭಕ್ಷಕರಂತೆ ಕಡಂಬಳ ಹಾವು ತಮ್ಮ ಜಾತಿಯ ಮರಿಗಳನ್ನು ತಿನ್ನುತ್ತವೆ. ಆದ್ದರಿಂದ ಬೋನಿನಲ್ಲಿ ಸಂಗ್ರಹಿಸಿಟ್ಟ ಕಡಂಬಳಗಳ ಗುಂಪಿನಲ್ಲಿ ಚಿಕ್ಕ ಕಡಂಬಳಗಳು ಕಾಣದಾಗುವುದು ಅಪರೂಪದ ವಿಷಯವೇನಲ್ಲ. ಪಟ್ಟೆ ಬೆನ್ನೇಣು ಹಾಗೂ ಆಲಿವ್ ಬೆನ್ನೇಣು ಹಾವುಗಳೆಂದರೆ ಕಡಂಬಳಗಳಿಗೆ ಹೆಚ್ಚು ಪ್ರಿಯವಾದ ಆಹಾರವಾಗಿರುವಂತೆ ಕಾಣುತ್ತದೆ.

**ಪರಿಸ್ಥಿತಿ :** ಸಾಮಾನ್ಯ ಕಡಂಬಳಗಳು ಕೆಲವು ಪ್ರದೇಶಗಳಲ್ಲಿ ಸಾಮಾನ್ಯವಾಗಿಯೂ ಹಾಗೂ ತುಂಬ ಹೆಚ್ಚಿನ ಸಂಖ್ಯೆಯಲ್ಲಿಯೂ ಇವೆ. ಅವು ಮಾನವನ ವಾಸಸ್ಥಳಗಳ ಸುತ್ತಮುತ್ತ ವಾಸಿಸುತ್ತವೆ. ಅವು ನಿಶಾಚರಿಗಳಾಗಿರುವುದರಿಂದ ಯಾವುದೇ ತೊಂದರೆಯಿಲ್ಲದೆ ಜೀವನ ಸಾಗಿಸುತ್ತವೆ.

**ವಿಷ :** ಕಡಂಬಳದ ವಿಷವು ಅತ್ಯಂತ ವಿಷಕಾರಿ ಮತ್ತು ಅದು ನರವ್ಯೂಹದ ಸ್ಥಗಿತತೆಗೆ ಪ್ರೇರೇಪಿಸುತ್ತದೆ. ಕಡಂಬಳ ಕಚ್ಚಿದ ಜಾಗದಲ್ಲಿ ಬಾಹ್ಯ ಹಾಗೂ ಸ್ಥಳೀಯವಾದ ಯಾವುದೇ ಚಿನ್ಹೆಗಳು ಕಾಣುವುದಿಲ್ಲವಾದುದರಿಂದ, ಆ ವ್ಯಕ್ತಿಗೆ ಲಕ್ವದ ಚಿನ್ಹೆಗಳು ಕಾಣಿಸಿಕೊಳ್ಳುತ್ತವೆಯೇ ಎಂದು ಗಮನಿಸಬೇಕು. ಅಂತಹ ಚಿನ್ಹೆಗಳು ಕಂಡ ತಕ್ಷಣ ವ್ಯಕ್ತಿಗೆ ಪ್ರತಿವಿಷ ಚಿಕಿತ್ಸೆ ನೀಡಬೇಕು.

# 22. ಪಟ್ಟೆ ಕಡಂಬಳ

*ಬಂಗಾರಸ್ ಫ್ಯಾಸಿಯೇಟಸ್ (Bungarus fasciatus)*

**ವಿಶಿಷ್ಟ ಲಕ್ಷಣಗಳು :** ಮಧ್ಯಮದಿಂದ ಬೃಹತ್ ಗಾತ್ರದ ಶರೀರ ; ನುಣುಪಾದ ಹೊಳೆಯುವ ಹುರುಪೆಗಳು ; ಬೆನ್ನ ಮೇಲೆ ಹೊಳಪಿನ ಹಳದಿ ಮತ್ತು ಕಪ್ಪುಬಣ್ಣದ ಅಗಲವಾದ ಪಟ್ಟೆಗಳು.

**ಸರಾಸರಿ ಉದ್ದ :** 1.5 ಮೀ.; ಹುಟ್ಟಿದಾಗ : 25-30 ಸೆಂ.ಮೀ.; ಗರಿಷ್ಠ : 2.25 ಮೀ.

**ವಿವರಣೆ :** ಪಟ್ಟೆ ಕಡಂಬಳವು ಹಳದಿ ಮತ್ತು ಕಪ್ಪು ಬಣ್ಣಗಳ ವಿಶಿಷ್ಟವಾದ ಪಟ್ಟೆಗಳನ್ನು ಹೊಂದಿರುವ ಬೃಹತ್ ಶರೀರದ ಹಾವು. ಇದಕ್ಕೆ ಎದ್ದು ಕಾಣುವ ಬೆನ್ನು ಮೂಳೆ, ಮೊಂಡು ಬಾಲ ಹಾಗೂ ಶರೀರದಿಂದ ಸ್ವಲ್ಪ ಬೇರೆಯಾಗಿ ಕಾಣುವ ದುಂಡು ತಲೆಯಿದೆ. ಶರೀರದ ತಳಭಾಗದಲ್ಲಿ ಮಸುಕಾಗಿರುವ ಪಟ್ಟೆಗಳಿವೆ.

**ವಿತರಣೆ :** ಅಸ್ಸಾಂ, ಬಂಗಾಳ, ಬಿಹಾರ ಮತ್ತು ಒರಿಸ್ಸಾ ಅಲ್ಲದೆ ಮಧ್ಯಪ್ರದೇಶ, ಆಂಧ್ರಪ್ರದೇಶ ಮತ್ತು ಉತ್ತರಪ್ರದೇಶಗಳ ಭಾಗಗಳಲ್ಲಿ ಈ ಹಾವು ಇರುವುದು ವರದಿಯಾಗಿದೆ. ಸಮುದ್ರ ಮಟ್ಟದಿಂದ 1500 ಮೀಟರುಗಳಷ್ಟು ಎತ್ತರದವರೆಗೂ ಈ ಹಾವು ಕಂಡುಬಂದಿದೆ.

**ಆವಾಸ :** ಪಟ್ಟೆ ಕಡಂಬಳಗಳು ನೀರಿನ ಸಮೀಪವಿರುವ ಹುತ್ತ ಹಾಗೂ ದಂಶಕಗಳ ಬಿಲಗಳಲ್ಲಿ ವಾಸಮಾಡುತ್ತವೆ. ಹಳ್ಳಿಗಳಲ್ಲಿ ದಂಶಕಗಳು ಮತ್ತು ನೀರು ದೊರಕುವುದರಿಂದ ಈ ಹಾವುಗಳು ಕೆಲವು ವೇಳೆ ಹಳ್ಳಿಗಳ ಹತ್ತಿರವೂ ವಾಸಿಸುತ್ತವೆ. ಇವು ಮೈದಾನ ಪ್ರದೇಶಕ್ಕೆ ಆದ್ಯತೆ ನೀಡುತ್ತವೆ.

**ಸ್ವಭಾವ :** ಬೇರೆಲ್ಲಾ ಕಡಂಬಳಗಳಂತೆ ಗೋಪ್ಯ ಸ್ವಭಾವದ ಈ ಹಾವು ರಾತ್ರಿ ವೇಳೆ ಮಾತ್ರ ಹೊರಸಂಚಾರಕ್ಕೆ ಬರುತ್ತದೆ. ಪಟ್ಟೆ ಕಡಂಬಳಗಳು ಪುಕ್ಕಲು ಹಾಗೂ ಮೃದು ಸ್ವಭಾವದ ಹಾವುಗಳು. ಹೆಚ್ಚಿನ ಎಚ್ಚರಿಕೆ ವಹಿಸದೆ ಹಾವಾಡಿಗರು ಈ ಹಾವುಗಳನ್ನು ಹಿಡಿಯುತ್ತಾರೆ. ಅಲ್ಲದೆ ಈ ಹಾವುಗಳು ರಾತ್ರಿಯ ವೇಳೆ ಚುರುಕಾಗಿರುತ್ತವೆಂದು ಹೇಳುತ್ತಾರೆ. ಭಾರತದ ಬಹಳಷ್ಟು ನಿಶಾಚರಿ ಹಾವುಗಳಂತೆ ಸುಂದರವಾದ ಈ ಹಾವುಗಳ ಸ್ವಭಾವದ ಬಗ್ಗೆಯೂ ನಮಗೆ ತಿಳಿದಿರುವುದು ತುಂಬ ಕಡಿಮೆ.

**ಸಂತಾನ :** ಚೆನ್ನೈನ ಸರ್ಪವನದಲ್ಲಿ ಬಂಗಾಳದ ಪಟ್ಟೆ ಕಡಂಬಳದ ಹೆಣ್ಣುಹಾವು ಏಪ್ರಿಲ್ 3ರಂದು 12 ಮೊಟ್ಟೆಗಳನ್ನಿಟ್ಟಿತು. 60 ದಿನಗಳ ನಂತರ ಆರು ಮೊಟ್ಟೆಗಳು ಒಡೆದು ಮರಿಹಾವುಗಳು ಹೊರಬಂದವು.

**ಆಹಾರ :** ಪಟ್ಟೆ ಕಡಂಬಳ ಹಾವುಗಳ ಆಹಾರ ಗಳಿಸುವ ಸ್ವಭಾವವು ಸಾಮಾನ್ಯ ಕಡಂಬಳದಂತೆ ಇದೆ. ಈ ಹಾವುಗಳು ಸಾಮಾನ್ಯ ಕಡಂಬಳಗಳನ್ನು ತಿನ್ನುತ್ತವೆ. ಬಂಧನದಲ್ಲಿದ್ದಾಗ ಇವು ಹಾವುಗಳನ್ನು (ನೀರು ಹಾವುಗಳು) ಮತ್ತು ಹರೆಯದ ಇಲಿಗಳನ್ನು ತಿನ್ನುತ್ತವೆ. ಹಾವು ಹಿಡಿದ 10 ರಿಂದ 20 ನಿಮಿಷಗಳಲ್ಲಿ ಈ ಪ್ರಾಣಿ



ಪಟ್ಟೆ ಕಡಂಬಳ

ಸಾಮಾನ್ಯವಾಗಿ ಸಾಯುತ್ತದೆ. ವಿಷದ ಪರಿಣಾಮದ ಜೊತೆಗೆ ಹಾವಿನ ದವಡೆಗಳ ಬಿಗಿ ಹಿಡಿತವು ಈಡುಜೀವಿಯ ಉಸಿರು ಕಟ್ಟುವಂತೆ ಮಾಡುತ್ತದೆ.
**ಪರಿಸ್ಥಿತಿ :** ಸಾಕಷ್ಟು ಸಾಮಾನ್ಯವಾಗಿದ್ದರೂ ಕಣ್ಣಿಗೆ ಬೀಳುವುದು ಅಪರೂಪ.
**ವಿಷ :** ಈ ಹಾವಿನ ವಿಷವು ತುಂಬಾ ವಿಷಕಾರಿಯೆಂದು ಗುರುತಿಸಲಾಗಿದೆ. ಆದರೆ ಪಟ್ಟೆ ಕಡಂಬಳ ಕಚ್ಚುವುದೇ ಅಪರೂಪ. ಇದರ ಕಚ್ಚುವಿಕೆಯಿಂದ ಸಾವು ಉಂಟಾದ ಬಗ್ಗೆ ಭಾರತದಲ್ಲಿ ವರದಿಯಾಗಿಲ್ಲ. ಭಾರತದಲ್ಲಿ ಈ ಹಾವಿನ ಕಡಿತಕ್ಕೆ ಸೂಕ್ತವಾದ ಪ್ರತಿವಿಷವನ್ನು ತಯಾರಿಸುತ್ತಿಲ್ಲ. ಇದರ ಪ್ರತಿವಿಷವನ್ನು ಸಿದ್ಧಪಡಿಸುತ್ತಿರುವ ಅತ್ಯಂತ ಸಮೀಪದ ಸ್ಥಳವೆಂದರೆ ಬ್ಯಾಂಕಾಕಿನ ಕ್ವೀನ್ ಸಾವೊವಭಾ ಸಂಸ್ಥೆ.

ವಿಷಕಾರಿ

# 23. ತೆಳುವಾದ ಹವಳದ ಹಾವು

*ಕಾಲೋಫಿಸ್ ಮೆಲನೂರಸ್ (Callophis melanurus)*

**ವಿಶಿಷ್ಟ ಲಕ್ಷಣಗಳು :** ಚಿಕ್ಕ ಹಾಗೂ ತೆಳುವಾದ ಶರೀರ ; ನುಣುಪಾದ ಹೊಳೆಯುವ ಹುರುಪೆಗಳು ; ಮೊಂಡಾದ ಕಪ್ಪು ತಲೆ ; ಕಪ್ಪು ಬಾಲ ; ಕಡುಗೆಂಪು ಮತ್ತು ನೀಲಿ ಬಣ್ಣವಿರುತ್ತದೆ.
**ಸರಾಸರಿ ಉದ್ದ :** 25 ಸೆಂ.ಮೀ. ; ವ್ಯಾಸ : 5 ಮಿ.ಮೀ.
**ವಿವರಣೆ :** ತೆಳುವಾದ ಹವಳದ ಹಾವು ತಿಳಿ ಕಂದು ಬಣ್ಣವಿದ್ದು ಅಸ್ಪಷ್ಟವಾದ ಚುಕ್ಕೆಗಳನ್ನು ಹೊಂದಿದೆ. ತಲೆ ಮತ್ತು ಕುತ್ತಿಗೆ ಕಂದು ಬಣ್ಣವಿದ್ದು ತಲೆಯ ಮೇಲೆ ಸ್ಪಷ್ಟವಾಗಿ ಗೋಚರಿಸುವ ಹಳದಿ ಬಣ್ಣದ ಎರಡು ಚುಕ್ಕೆಗಳಿವೆ. ಬಾಲದ ತಳಭಾಗ ಹಾಗೂ ಬಾಲದ ತುದಿಯಲ್ಲಿ ಅಸಮವಾದ ಕಪ್ಪು ಬಣ್ಣದ ದುಂಡುಪಟ್ಟೆಯಿದೆ. ಶರೀರದ ತಳಭಾಗ ಸಮನಾದ ಪಾಟಲ ಕೆಂಪು (ಹವಳದ ಬಣ್ಣ) ಬಣ್ಣ ; ಗುದದ್ವಾರ ಹೊಳೆಯುವ ಕಡುಗೆಂಪು ಮತ್ತು ಬಾಲದ ತಳಭಾಗ ನೀಲಿಬಣ್ಣ ಇರುತ್ತದೆ. ತಲೆ ಮೊಂಡಾಗಿದೆ ಮತ್ತು ಕುತ್ತಿಗೆಯಷ್ಟೇ ಅಗಲವಾಗಿರುತ್ತದೆ. ಹುರುಪೆಗಳು ನುಣುಪಾಗಿವೆ ಮತ್ತು ಸುಮಾರಾಗಿ ಹೊಳೆಯುತ್ತಿರುತ್ತವೆ. ಭಾರತದಲ್ಲಿರುವ 5 ಹಾವುಗಳ (ಹವಳದ) ಪ್ರಭೇದಗಳಲ್ಲಿ ತೆಳುವಾದ ಹವಳದ ಹಾವೂ ಒಂದು. ಮಿಕ್ಕ ನಾಲ್ಕು ಪ್ರಭೇದಗಳು ಪಶ್ಚಿಮ ಘಟ್ಟಗಳು ಹಾಗೂ ಪೂರ್ವ ಹಿಮಾಲಯಗಳಲ್ಲಿ ಬದುಕುವ ಅರಣ್ಯ ಜೀವಿಗಳು.
**ವಿತರಣೆ :** ಮಧ್ಯ ಹಾಗೂ ವಾಯವ್ಯ ಭಾರತದ ಪ್ರದೇಶಗಳನ್ನು ಬಿಟ್ಟು ಮಿಕ್ಕ ಬಹಳಷ್ಟು ಮೈದಾನ ಪ್ರದೇಶಗಳಲ್ಲಿ ಈ ಹಾವುಗಳು ಇರುವುದು ವರದಿಯಾಗಿದೆ. ಮೆಕ್ಲಾಂಡ್ ಹವಳದ ಹಾವು ಹಿಮಾಲಯದಲ್ಲಿ ನಾಲ್ಕು ಸಾವಿರ ಮೀಟರ್‌ಗಳ ಎತ್ತರದಲ್ಲೂ ಇರುವುದು ಕಂಡುಬಂದಿದೆ.



ತೆಳುವಾದ ಹವಳದ ಹಾವು

**ಆವಾಸ :** ಚೆನ್ನೈನ ಸಮೀಪದ ಕಡಲತೀರದಲ್ಲಿರುವ ಕುರುಚಲು ಕಾಡುಗಳಲ್ಲಿ ಎಲೆಗಳ ಕೆಳಗೆ, ಇಟ್ಟಿಗೆ ಮತ್ತು ಕಸದ ರಾಶಿಯ ಕೆಳಗೆ ಮತ್ತು ಮರಳು ದಿಣ್ಣೆಗಳಲ್ಲಿ ತೆಳುವಾದ ಹವಳದ ಹಾವುಗಳನ್ನು ನಾವು ನೋಡಿದ್ದೇವೆ.

**ಸ್ವಭಾವ :** ಪ್ರಧಾನವಾಗಿ ನಿಶಾಚರಿ; ಚಳಿಗಾಲದ ತಿಂಗಳುಗಳಲ್ಲಿ ಕೆಲವೊಮ್ಮೆ ಮುಂಜಾನೆ ಚಟುವಟಿಕೆಯಿಂದಿರುತ್ತದೆ. ಮರಳು ಮಣ್ಣಿನಲ್ಲಿ ಈ ಹಾವುಗಳು ಸುಲಭವಾಗಿ ಬಿಲಗಳನ್ನು ಮಾಡುತ್ತವೆ ಮತ್ತು ಬಿಲದಿಂದ ತಲೆಯನ್ನು ಮಾತ್ರ ಹೊರಗೆ ಹಾಕಿಕೊಂಡು ನಿಶ್ಚಲವಾಗಿರುತ್ತವೆ. ಬಂಧನದಲ್ಲಿರುವ ಹಾವುಗಳು ಬಹಳಷ್ಟು ವೇಳೆಯನ್ನು ಮರಳೊಳಗೆ ಕಳೆಯುತ್ತವೆ. ಹವಳದ ಹಾವುಗಳನ್ನು ಕೆರಳಿಸಿದಾಗ ಅವು ಬಾಲವನ್ನು ಸುತ್ತಿಕೊಂಡು ಮೇಲೆತ್ತಿ ಅಲುಗಾಡಿಸುತ್ತವೆ ಮತ್ತು ಬಾಲದ ತಳದಲ್ಲಿ ಇರುವ ಆಕರ್ಷಕ ಬಣ್ಣಗಳನ್ನು ತೋರಿಸಿ ತಲೆಯನ್ನು ಕಾಣದಂತೆ ಮರೆಮಾಡುತ್ತವೆ.

**ಸಂತಾನ :** ಭಾರತದ ಎಲ್ಲಾ ಹವಳದ ಹಾವುಗಳು ಮೊಟ್ಟೆ ಹಾಕುತ್ತವೆ ಎಂಬುದನ್ನು ಬಿಟ್ಟರೆ ಈ ಹಾವುಗಳ ಸಂತಾನಕ್ಕೆ ಸಂಬಂಧಿಸಿದ ಮತ್ತಾವುದೇ ವಿಷಯ ನಮಗೆ ಗೊತ್ತಿಲ್ಲ. ಉತ್ತರ ಭಾರತದ ಪ್ರಭೇದಗಳು ಜುಲೈ–ಆಗಸ್ಟ್ ತಿಂಗಳಲ್ಲಿ 6 ರಿಂದ 14 ಮೊಟ್ಟೆಗಳನ್ನು ಇಟ್ಟಿರುವುದು ತಿಳಿದುಬಂದಿದೆ.

**ಆಹಾರ :** ಚೆನ್ನೈನ ಸರ್ಪವನದಲ್ಲಿರುವ ಬಂಧಿತ ಹಾವುಗಳು ಹುಳ- ಹಾವುಗಳನ್ನು ತಿನ್ನುತ್ತವೆ.

**ಪರಿಸ್ಥಿತಿ :** ಅಪರೂಪದ ಹಾವುಗಳು ಎನ್ನಲಾದ ಈ ಹಾವುಗಳು ಅರಣ್ಯವಾಸಿಗಳು. ನಮ್ಮ ಅರಣ್ಯಗಳ ವಿಸ್ತಾರ ಕಡಿಮೆಯಾಗುತ್ತಿರುವುದರಿಂದ ಸಹಜವಾಗಿ ಈ ಹಾವುಗಳು ಮತ್ತಷ್ಟು ಅಪರೂಪವಾಗುತ್ತಿವೆ.

**ವಿಷ :** ನಾಗರಹಾವಿನ ಸಮೀಪ ಸಂಬಂಧಿಗಳಾದ ಈ ಪುಟ್ಟ ಹಾವುಗಳ ವಿಷದ ಬಗ್ಗೆ ಏನೂ ತಿಳಿದಿಲ್ಲ. ಆದರೆ ಪಟ್ಟೆ ಹವಳದ ಹಾವು ಒಂದು ಮೀಟರಿಗೂ ಉದ್ದ ಬೆಳೆಯುವುದರಿಂದ ಬಹುಶಃ ಮನುಷ್ಯನಿಗೆ ಅಪಾಯಕಾರಿಯಾಗಿರಬಹುದು.

*ವಿಷಕಾರಿ*

# 24. ಹೆಡೆ ಗುರುತಿನ ನಾಗರಹಾವು

*ನಾಜ ನಾಜ ನಾಜ (Naja naja naja)*

**ವಿಶಿಷ್ಟ ಲಕ್ಷಣಗಳು :** ಮಧ್ಯಮದಿಂದ ದೊಡ್ಡ ಗಾತ್ರದ ಶರೀರ ; ನುಣುಪಾದ, ಹೊಳೆಯುವ ಹುರುಪೆಗಳು ; ಅಗಲವಾದ ಕುತ್ತಿಗೆ ಮತ್ತು ತಲೆ ; ಕುತ್ತಿಗೆಯ ತಳಭಾಗದಲ್ಲಿ ಅಗಲವಾದ ಕಪ್ಪು ಪಟ್ಟೆ ; ಕುತ್ತಿಗೆಯ ಮೇಲ್ಭಾಗದಲ್ಲಿ ಹೆಡೆಯ ವಿಶಿಷ್ಟ ಗುರುತು.

**ಸರಾಸರಿ ಉದ್ದ :** 1 ಮೀ. ; ಹುಟ್ಟಿದಾಗ : 25 ಸೆಂ.ಮೀ. ; ಗರಿಷ್ಠ : 2 ಮೀ. (ಗಂಡು).



ಹೆಡೆ ಗುರುತಿನ ನಾಗರಹಾವು

**ವಿವರಣೆ :** ಕನ್ನಡಕದ ಹೆಡೆ ಗುರುತಿನ ನಾಗರಹಾವು ಮಧ್ಯಮ ಗಾತ್ರದ ಶರೀರ, ಅಗಲವಾದ ಕುತ್ತಿಗೆ ಮತ್ತು ತಲೆ, ನುಣುಪಾದ ಹುರುಪೆಗಳು ಹಾಗೂ ಕಪ್ಪು ಕಣ್ಣುಗಳನ್ನು ಹೊಂದಿದೆ. ಶರೀರ ಕಪ್ಪು ಅಥವಾ ಕಡುಕಂದು ಬಣ್ಣದಿಂದ ಹಿಡಿದು ಹಳದಿಯ ಬಿಳುಪು ಬಣ್ಣದವರೆಗೆ ವಿಭಿನ್ನವಿರುತ್ತದೆ. ಹಾವಿನ ತಳಭಾಗವು ಬಿಳುಪು ಅಥವಾ ಹಳದಿಯ ಚುಕ್ಕೆಗಳ ವಿನ್ಯಾಸಗಳಿಂದ ಆವೃತವಾಗಿರುತ್ತದೆ. ಕೆಲವೊಮ್ಮೆ ಈ ವಿನ್ಯಾಸವು ಹರಕು ಮುರುಕಾದ ಪಟ್ಟೆಗಳಂತಿರುತ್ತದೆ. ಸುಪ್ರಸಿದ್ಧ ನಾಗರಹಾವಿನ ಹೆಡೆಯ ಗುರುತು ಜೋಡಿವರ್ತುಲಗಳನ್ನು ಕೂಡಿಸಿದ ಕನ್ನಡಕದಂತಿದೆ. ಕೆಲವೊಮ್ಮೆ ಈ ಗುರುತು ಕನ್ನಡಕವನ್ನು ಹೋಲದೆ ಇರಬಹುದು – ಅಥವಾ ಸಂಪೂರ್ಣವಾಗಿಲ್ಲದೆ ಇರಬಹುದು. ವಾಯವ್ಯ ಭಾರತದ ಹಾವುಗಳು ಕಪ್ಪಗಿರುತ್ತವೆ ಮತ್ತು ಗುರುತಿಸಲಾಗದಂತಹ ಹೆಡೆಯ ಗುರುತು ಹೊಂದಿರುತ್ತವೆ. ಅನೇಕ ವೇಳೆ ನಾಗರಹಾವುಗಳನ್ನು ಮತ್ತು ಕೇರೆ ಹಾವುಗಳನ್ನು ಗುರುತಿಸುವಲ್ಲಿ ಗೊಂದಲವಿದೆ. ಆದರೆ ಕೇರೆ ಹಾವುಗಳಿಗೆ ನಾಗರಹಾವುಗಳಿಗಿಂತ ತೆಳುವಾದ ಕುತ್ತಿಗೆ ಮತ್ತು ತಲೆಯಿರುತ್ತದೆ. ಭಾರತದ ಅತಿದೊಡ್ಡ ನಾಗರಕ್ಕಿಂತ ಕೇರೆ ಹಾವುಗಳು ಒಂದು ಮೀಟರ್ ಉದ್ದ ಅಂದರೆ 3 ಮೀಟರ್‌ಗಳಷ್ಟು ಉದ್ದ ಬೆಳೆಯಬಲ್ಲವು.

ಭಾರತದ ನಾಗರಗಳಲ್ಲಿ ಸಾಮಾನ್ಯವಾಗಿ ಗುರುತಿಸಿರುವ 3 ಉಪ–ಪ್ರಭೇದಗಳಲ್ಲಿ ಹೆಡೆಯ ಗುರುತಿನ ನಾಗರ ಬಹಳಷ್ಟು ಪ್ರದೇಶಗಳಲ್ಲಿ ಕಂಡುಬರುವ ಹಾವು ಮತ್ತು ಭಾರತದ 4 ದೊಡ್ಡ ವಿಷಕಾರಿ ಸರ್ಪಗಳಲ್ಲಿ ಇದೂ ಒಂದು. ನಾಗರಹಾವುಗಳಲ್ಲಿ 9 ಪ್ರಭೇದಗಳು ಆಫ್ರಿಕದಲ್ಲಿ ಮತ್ತು ಏಷ್ಯದಲ್ಲಿ 6 ಪ್ರಭೇದಗಳು ಇವೆ. ವಾಯವ್ಯ ಭಾರತ ಮತ್ತು ಪಾಕಿಸ್ತಾನದಲ್ಲಿರುವ ಕಡುಕಪ್ಪು ಬಣ್ಣದ ನಾಗರ ಮತ್ತೊಂದು ಉಪ–ಪ್ರಭೇದ ಅಥವಾ ಭೌಗೋಳಿಕ ಜಾತಿಗೆ ಸೇರಿದೆ. ಬಣ್ಣ ಮತ್ತು ಹೆಡೆ ಗುರುತು ಇಲ್ಲದಿರುವುದನ್ನು ಬಿಟ್ಟರೆ, ಬೇರೆಲ್ಲ ಗುಣಗಳಲ್ಲಿ ಇದು ಹೆಡೆಗುರುತಿನ ನಾಗರದಂತೆಯೇ ಇದೆ.

**ವಿತರಣೆ :** ಭಾರತದಾದ್ಯಂತ, ಸಮುದ್ರಮಟ್ಟದಿಂದ 4000 ಮೀ. ಎತ್ತರದವರೆಗೆ (ಹಿಮಾಲಯ ಪರ್ವತಗಳಲ್ಲಿ).

**ಆವಾಸ :** ವಾಸಿಸಲು ಬಿಲ ಮತ್ತು ಆಹಾರಕ್ಕೆ ಬಹಳಷ್ಟು ಇಲಿಗಳನ್ನು ಹೊಂದಿರುವ ಭತ್ತ ಬೆಳೆಯುವ ಪ್ರದೇಶಗಳಲ್ಲಿ ನಾಗರಹಾವುಗಳು ಸಾಮಾನ್ಯವಾಗಿರುತ್ತವೆ. ಆದರೂ ನಾಗರಗಳಿಗೆ ಸಾಕಷ್ಟು ಹೊಂದಾಣಿಕೆಯ ಸಾಮರ್ಥ್ಯವಿರುವಂತೆ ಕಾಣುತ್ತದೆ. ಹೀಗಾಗಿ ಅವು ದೇಶದ ಒಣಪ್ರದೇಶಗಳಲ್ಲಿಯೂ ಕಂಡುಬರುತ್ತವೆ. ನಾಗರಹಾವಿಗೆ ಸಂಚಾರಕ್ಕೆ ಪ್ರಿಯವಾದ ಪ್ರದೇಶಗಳೆಂದರೆ ಉಗ್ರಾಣ, ಹುತ್ತಗಳು, ಮಣ್ಣಿನ ಬದುಗಳು ಮತ್ತು ಕಲ್ಲುಗುಡ್ಡೆಗಳ ರಾಶಿಗಳು. ಇಲಿಗಳು ಎಲ್ಲೆಲ್ಲಿ ಹೆಚ್ಚಿರುತ್ತವೆಯೋ ಅಲ್ಲಿ ನಾಗರಹಾವುಗಳೂ ಹೆಚ್ಚಾಗುತ್ತವೆ.

**ಸ್ವಭಾವ :** ನಾಗರಗಳು ಸಾಮಾನ್ಯವಾಗಿ ಇಲಿಯ ಬಿಲಗಳಲ್ಲಿ, ಅನೇಕ ವೇಳೆ ಹಳ್ಳಿಗಳ ಸಮೀಪದಲ್ಲಿ ವಾಸಿಸುತ್ತವೆ. ಆದರೆ ಮನುಷ್ಯನ ಕಣ್ಣಿಗೆ ಬೀಳದಂತೆ ಜೀವಿಸುತ್ತವೆ. ಮೇಲೆರಗುವವರನ್ನು ಹೆದರಿಸಲು, ಕುತ್ತಿಗೆಯ ಎಲುಬುಗಳನ್ನು ಅಗಲಿಸಿ, ಹೆಡೆಯ ಮೇಲಿರುವ ಹೊಳೆಯುವ 'ಕಣ್ಣುಗಳಿಂದ' ಗಾಬರಿಗೊಳಿಸುವ ಎಚ್ಚರಿಕೆಯ ವಿಧಾನವನ್ನು

ನಾಗರಹಾವುಗಳು ಪ್ರದರ್ಶಿಸುತ್ತವೆ. ಮತ್ತಷ್ಟು ಕೆರಳಿದಾಗ ಅವು ಗಂಟಲ ಮೂಲಕ ಬಿರುಸಾಗಿ ಗಾಳಿಯನ್ನು ಹೊರಬಿಡುತ್ತಾ ಭುಸುಗುಟ್ಟುತ್ತವೆ. ಆಫ್ರಿಕಾದ ಕೆಲವು ನಾಗರ ಪ್ರಭೇದಗಳು ಗಾಳಿಯಲ್ಲಿ ಸುಮಾರು 2 ಮೀಟರುಗಳಷ್ಟು ದೂರದವರೆಗೂ ವಿಷವನ್ನು ಚಿಮ್ಮಿಸಬಲ್ಲವು. ಈಶಾನ್ಯ ಭಾರತದ ನಾಗರಹಾವುಗಳು ಸ್ವಲ್ಪ ದೂರದವರೆಗೆ ವಿಷವನ್ನು ಚಿಮ್ಮಿಸುತ್ತವೆ. ಸಂಚಾರಕ್ಕೆ ಮತ್ತು ಬೇಟೆಗೆ ಈ ಹಾವುಗಳು ಸಂಜೆಯ ವೇಳೆಯನ್ನು ಇಷ್ಟಪಡುತ್ತವೆ. ಮಳೆ ಬಿದ್ದಾಗ ನಾಗರಹಾವುಗಳು ಇತರೆ ಅನೇಕ ಹಾವುಗಳಂತೆ ಹೆಚ್ಚು ಚುರುಕಾಗುತ್ತವೆ.

**ಸಂತಾನ :** ಹೆಣ್ಣು ನಾಗರಹಾವು ಸಾಮಾನ್ಯವಾಗಿ ಮೇ ಮತ್ತು ಜುಲೈ ತಿಂಗಳುಗಳ ನಡುವೆ ಇಲಿಯ ಬಿಲ ಅಥವಾ ಹುತ್ತದಲ್ಲಿ (ಭಾರತದ ಆಯಾ ಪ್ರದೇಶಕ್ಕೆ ಅನುಗುಣವಾಗಿ) 12-30 ಮೊಟ್ಟೆಗಳನ್ನಿಡುತ್ತದೆ. ಹೆಚ್ಚು ಕಡಿಮೆ 60 ದಿನಗಳಲ್ಲಿ ಮೊಟ್ಟೆಗಳು ಒಡೆದು ಮರಿಗಳು ಹೊರಬರುವವರೆಗೂ ತಾಯಿನಾಗರ ಮೊಟ್ಟೆಗಳ ಹತ್ತಿರವೇ ಇರುತ್ತದೆ. ತೀರ ಅಪರೂಪಕ್ಕೆ ಮರಿಗಳಿಗೆ ತಾಯಿನಾಗರ ಆಹಾರ ನೀಡಬಹುದು. ತಂದೆ-ತಾಯಿಗಳ ಪಡಿಯಚ್ಚಿನಂತಿರುವ ಮರಿನಾಗರಗಳು ಸಾಮಾನ್ಯವಾಗಿ ಒಂದು ಅಥವಾ ಎರಡು ವಾರಗಳ ನಂತರ ಪರಸ್ಪರ ಬೇರ್ಪಡುತ್ತವೆ. ಕೆಲವೊಮ್ಮೆ ಒಂದು ಬಿಲದಲ್ಲಿ ಮೊಟ್ಟೆಗಳ ಒಂದು ಗುಂಪಿನ ಬದಲು ಹೆಚ್ಚು ಗುಂಪುಗಳಿರುವುದುಂಟು. ಅನೇಕ ಇತರ ಹಾವುಗಳಂತೆ, ನಾಗರಹಾವುಗಳೂ ಒಂದು ವರ್ಷದಲ್ಲಿ ಹಲವು ಬಾರಿ ಮೊಟ್ಟೆಗಳನ್ನಿಡಬಹುದು.

**ಆಹಾರ :** ಹರೆಯದ ನಾಗರಗಳು ಕೀಟ, ಹಲ್ಲಿ, ಕಪ್ಪೆ, ನೆಲಗಪ್ಪೆ ಮತ್ತು ಚಿಕ್ಕ ಹಾವುಗಳನ್ನು ತಿನ್ನುತ್ತವೆ. ಅವು ದೊಡ್ಡದಾದಂತೆ ಇಲಿ, ನೆಲಗಪ್ಪೆ, ಕಪ್ಪೆ ಮತ್ತು ಪಕ್ಷಿಗಳನ್ನು ತಿನ್ನುತ್ತವೆ. ನಾಗರಹಾವು ಉಡವನ್ನು ಹಿಡಿದು ನುಂಗುವುದನ್ನೂ ನಾವು ನೋಡಿದ್ದೇವೆ. ಈಡುಜೀವಿಯು ನಿಶ್ಚಲವಾಗುವವರೆಗೂ ನಾಗರಗಳು ಸಾಮಾನ್ಯವಾಗಿ ತಮ್ಮ ಹಿಡಿತವನ್ನು ಬಿಗಿಯಾಗಿಟ್ಟುಕೊಳ್ಳುತ್ತವೆ.

**ಪರಿಸ್ಥಿತಿ :** ನಾಗರಹಾವುಗಳು ವಾಸಿಸುವ ಬಹಳಷ್ಟು ಪ್ರದೇಶಗಳಲ್ಲಿ, ಅವುಗಳನ್ನು ಚರ್ಮಕ್ಕಾಗಿ ಬೇಟೆಯಾಡಿ ಕೊಲ್ಲಲಾಗುತ್ತಿದೆ. ಭಾರತ ಸರ್ಕಾರವು 1973 ರಿಂದ ನಾಗರಹಾವುಗಳ ಚರ್ಮದ ರಫ್ತನ್ನು ನಿಯಂತ್ರಿಸಿದೆ. ಆದರೂ ನಾಗರಹಾವಿನ ಚರ್ಮದ ವ್ಯಾಪಾರ ಚೆನ್ನಾಗಿಯೇ ಮುಂದುವರೆಯುತ್ತಿದೆ. ಕೆಲವು ಚರ್ಮದ ವ್ಯಾಪಾರಿಗಳು ಪ್ರತಿ ದಿನ ಸಾವಿರಾರು ನಾಗರಹಾವುಗಳ ಚರ್ಮದ ವ್ಯಾಪಾರ ಮಾಡುತ್ತಾರೆ. ನಾಗರಹಾವುಗಳು ಕೃಷಿ ಭೂಮಿಯನ್ನು ಇಷ್ಟಪಡುವುದರಿಂದಾಗಿ ಅರಣ್ಯಗಳು ಕೃಷಿಭೂಮಿಯಾಗಿ ಪರಿವರ್ತನೆಗೊಳ್ಳುತ್ತಿರುವುದರಿಂದ ನಾಗರಹಾವುಗಳಿಗೆ ಪ್ರಯೋಜನವಾಗಬಹುದು.

**ವಿಷ :** ನಾಗರಹಾವಿನ ವಿಷವು ನರಮಂಡಲದ ಮೇಲೆ ಪರಿಣಾಮ ಬೀರಿ ಉಸಿರಾಟ ಮತ್ತು ಹೃದಯ ಸ್ಥಗಿತಕ್ಕೆ ಕಾರಣವಾಗುತ್ತದೆ. ಸಾಮಾನ್ಯವಾಗಿ ನಾಗರಹಾವು ಕಚ್ಚಿದಾಗ ಮರಣ ಉಂಟಾಗುವಷ್ಟು ಪ್ರಮಾಣದ ವಿಷ ಬಿಡುವುದಿಲ್ಲ. ಆದರೂ ನಾಗರಹಾವಿನ ಎಲ್ಲಾ ಕಡಿತಗಳಿಗೂ ತಕ್ಷಣ ಚಿಕಿತ್ಸೆ ನೀಡಬೇಕು. ನಾಗರಹಾವುಗಳ ವಿಷದ ಬಗ್ಗೆ ಹೆಚ್ಚಿನ

ಸಂಶೋಧನೆ ನಡೆಯುತ್ತಿದೆ. ಇಲಿಗಳಲ್ಲಿನ ಕೆಲವು ಕ್ಯಾನ್ಸರ್ ಜೀವಕೋಶಗಳನ್ನು ನಾಶಪಡಿಸುವ ಗುಣ ನಾಗರಹಾವಿನ ಸೂಕ್ಷ್ಮ ಪ್ರಮಾಣದ ವಿಷಕ್ಕೆ ಇದೆಯೆಂಬುದನ್ನು ಮುಂಬಯಿಯ ಟಾಟಾ ಸ್ಮಾರಕ ಕ್ಯಾನ್ಸರ್ ಸಂಸ್ಥೆ ಕಂಡುಹಿಡಿದಿದೆ. 'ಕೊಬ್ರಾಕ್ಸಿನ್' ಮತ್ತು 'ನೈಲಾಕ್ಸಿನ್'ಗಳಂತಹ ಪ್ರಭಾವಶಾಲಿ ನೋವು ಶಮನಕಾರಿ ಔಷಧಗಳನ್ನು ನಾಗರಹಾವಿನ ವಿಷದಿಂದ ತಯಾರಿಸಲಾಗುತ್ತಿದೆ.

*ವಿಷಕಾರಿ*

# 25. ಒಂಟಿ ಕಣ್ಣಿನ ಹೆಡೆ ಗುರುತಿನ ನಾಗರಹಾವು

*ನಾಜ ನಾಜ ಕೌತಿಯ (Naja naja kaouthia)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರದ ಶರೀರ ; ನುಣುಪಾದ ಹೊಳೆಯುವ ಹುರುಪೆಗಳು ; ಅಗಲವಾದ ತಲೆ ಮತ್ತು ಕುತ್ತಿಗೆ ; ಕನ್ನಡಕದ ಹೆಡೆ ಗುರುತಿನ ನಾಗರಕ್ಕಿಂತ ಭಿನ್ನವಾದ ಗುರುತಿರುವ ಹೆಡೆ.

**ಸರಾಸರಿ ಉದ್ದ:** 1ಮೀ. ಹುಟ್ಟಿದಾಗ: 20 ಸೆಂ.ಮೀ. ; ಗರಿಷ್ಠ : 1.5 ಮೀ. (ಗಂಡು).

**ವಿವರಣೆ :** ಕನ್ನಡಕದ ಗುರುತಿನ ನಾಗರಕ್ಕಿಂತ ಒಂಟಿ ಕಣ್ಣಿನ ಹೆಡೆ ಗುರುತಿನ ನಾಗರಹಾವಿನ ಚರ್ಮ ಹೊಳೆಯುತ್ತಿರುತ್ತದೆ. ಹೆಡೆ ಚಿಕ್ಕದು ಮತ್ತು ದುಂಡಾಗಿರುತ್ತದೆ. ತಲೆ ಚಿಕ್ಕದಾಗಿರುತ್ತದೆ. ಶರೀರ ಹಳದಿಯಿಂದ ಹಿಡಿದು ಹಸಿರು ಬಣ್ಣ ಮಿಶ್ರಿತ ಕಂದು, ಕಪ್ಪು ಬಣ್ಣದವರೆಗೆ ಭಿನ್ನವಾಗಿರುತ್ತದೆ ಹಾಗೂ ಅಸಮ ಪಟ್ಟೆಗಳಿರುತ್ತವೆ. ಹೆಡೆಯ ಮೇಲೆ ವಿಶಿಷ್ಟವಾದ ಬಿಳಿಯ ಬಣ್ಣದ ಒಂಟಿ ಕಣ್ಣಿನ ಹೆಡೆ ಗುರುತಿದೆ. ಶರೀರದ ತಳಭಾಗವು ಹಳದಿಮಿಶ್ರಿತ ಬಿಳುಪು ಬಣ್ಣವಿರುತ್ತದೆ. ಮೇಲ್ನೋಟಕ್ಕೆ ಒಂಟಿ ಕಣ್ಣಿನ ಹೆಡೆ ಗುರುತಿರುವ ನಾಗರಗಳು ಕನ್ನಡಕದ ಹೆಡೆ ಗುರುತಿನ ನಾಗರಗಳನ್ನು ಹೋಲುತ್ತವೆ. ಆದರೆ ಅವುಗಳ ನಡುವೆ ಸೂಕ್ಷ್ಮವಾದ ವ್ಯತ್ಯಾಸಗಳಿವೆ.

**ವಿತರಣೆ :** ಉತ್ತರಪ್ರದೇಶ, ಬಿಹಾರ, ಒರಿಸ್ಸ ಮತ್ತು ಅಂಡಮಾನಿನ ಕೆಲವು ಭಾಗಗಳು ಹಾಗೂ ಅಸ್ಸಾಂ, ಈಶಾನ್ಯ ಭಾರತ ಮತ್ತು ಬಂಗಾಳದ ಎಲ್ಲ ಪ್ರದೇಶಗಳಲ್ಲಿ ನಾಗರಹಾವಿನ ಉಪ-ಪ್ರಭೇದಗಳಾದ ಒಂಟಿ ಕಣ್ಣಿನ ಹೆಡೆ ಗುರುತಿನ ನಾಗರಗಳು ಸಾಮಾನ್ಯವಾಗಿ ಕಂಡುಬರುತ್ತವೆ.

**ಆವಾಸ :** ಈ ನಾಗರವು ಕನ್ನಡಕದ ಹೆಡೆ ಗುರುತಿನ ನಾಗರಕ್ಕಿಂತ ಹೆಚ್ಚು ತಂಪಿರುವ ಪ್ರದೇಶಗಳಲ್ಲಿ ವಾಸಿಸುತ್ತದೆ.

**ಸ್ವಭಾವ :** ಒಂಟಿ ಕಣ್ಣಿನ ಹೆಡೆ ಗುರುತಿನ ನಾಗರಗಳು ಪ್ರಧಾನವಾಗಿ ನಿಶಾಚರಿಗಳು. ಇವನ್ನು ಕೆಲವೊಮ್ಮೆ ಬಂಗಾಳದ ನಾಗರಗಳೆಂದು ಕರೆಯುತ್ತಾರೆ. ಅವನ್ನು ಕೆಣಕಿದಾಗ ಹೆಡೆಯನ್ನು ಬಿಚ್ಚಿ ಬುಸುಗುಟ್ಟುತ್ತವೆ. ಆದರೆ ಅನ್ಯಥಾ ಮಾರ್ಗವಿಲ್ಲವಾದಾಗ ಮಾತ್ರ ಇವು ಕಚ್ಚುತ್ತವೆ. ಬಹಳಷ್ಟು ಹಾವುಗಳಲ್ಲಿರುವಂತೆ ನಾಗರಹಾವುಗಳಲ್ಲಿನ



ಒಂಟಿ ಕಣ್ಣಿನ ಹೆಡೆ ಗುರುತಿನ ನಾಗರಹಾವು

ಸ್ವಭಾವದಲ್ಲಿಯೂ ವ್ಯತ್ಯಾಸವಿರುತ್ತದೆ. ಕೆಲವು ನಾಗರಗಳು ಕೆರಳದ ಸಾಧು ಸ್ವಭಾವ ಹೊಂದಿರುವುದನ್ನು ಮತ್ತು ಬಹಳಷ್ಟು ನಾಗರಗಳು ಅತಿ ಚಟುವಟಿಕೆಯ ಹಾಗೂ ಶೀಘ್ರವಾಗಿ ಪ್ರತಿಸ್ಪಂದಿಸುವ ಸ್ವಭಾವ ಪಡೆದಿರುವುದನ್ನು ನಾವು ನೋಡಿದ್ದೇವೆ. ಅವಕಾಶ ಸಿಕ್ಕಾಗಲೆಲ್ಲ ಅವು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತವೆ.

**ಸಂತಾನ :** ಮೊಟ್ಟೆಗಳ ಸಂಖ್ಯೆ ಹಾಗೂ ಮೊಟ್ಟೆಯ ಗಾತ್ರ ಕನ್ನಡಕದ ಹೆಡೆ ಗುರುತಿನ ನಾಗರಕ್ಕಿಂತ ಬಹಶಃ ಚಿಕ್ಕದು. ಇವು ಜನವರಿ–ಮಾರ್ಚ್ ತಿಂಗಳುಗಳಲ್ಲಿ ಮೊಟ್ಟೆಗಳನ್ನಿಡುತ್ತವೆ.

**ಆಹಾರ :** ಶೀತರಕ್ತ ಪ್ರಾಣಿಗಳಾದ ಮೀನು ಮತ್ತು ಸಣ್ಣ ಹಾವುಗಳನ್ನು ತಿನ್ನಲು ಈ ಹಾವುಗಳು ಹೆಚ್ಚು ಇಷ್ಟಪಡುತ್ತದೆ. ಇವು ಇಲಿ ಮತ್ತು ಕಪ್ಪೆಗಳನ್ನೂ ತಿನ್ನುತ್ತವೆ.

**ಪರಿಸ್ಥಿತಿ :** ಚರ್ಮಕ್ಕಾಗಿ ಈ ಹಾವನ್ನು ಅಪಾರವಾಗಿ ಕೊಲ್ಲಲಾಗುತ್ತಿದೆ.

**ವಿಷ :** ಈ ಹಾವಿನ ವಿಷವು ಕನ್ನಡಕದ ಹೆಡೆ ಗುರುತಿನ ನಾಗರ ವಿಷಕ್ಕಿಂತ ಕಡಿಮೆ ವಿಷಕಾರಿಯೆಂದು ವರದಿಯಾಗಿದೆ. ಹಾಫ್‌ಕಿನ್ ಪ್ರತಿವಿಷವು ಈ ಹಾವಿನ ಕಡಿತಕ್ಕೆ ಪರಿಣಾಮಕಾರಿ.

*ವಿಷಕಾರಿ*

# 26. ಕಾಳಿಂಗ ಸರ್ಪ

*ಓಫಿಯೊಫ್ರಾಗಸ್ ಹನ್ನ (Ophiophagus hannah)*

**ವಿಶಿಷ್ಟ ಲಕ್ಷಣಗಳು :** ದೊಡ್ಡದಾದ ಶರೀರ ; ನುಣುಪಾದ ಹೊಳೆಯುವ ಹುರುಪೆಗಳು; ಪ್ರಧಾನವಾಗಿ ಶರೀರದ ಮುಂಭಾಗದಲ್ಲಿ ವಿಶಿಷ್ಟವಾದ ಬಿಳಿಯ ಅಡ್ಡ ಪಟ್ಟಿಗಳು ; ದೊಡ್ಡದಾದ ತಲೆ ; ಹುರುಪೆಗಳ ತುದಿಯಲ್ಲಿ ಕಪ್ಪು ಬಣ್ಣವಿರುತ್ತದೆ.

**ಸರಾಸರಿ ಉದ್ದ :** 3 ಮೀ. ; ಹುಟ್ಟಿದಾಗ : 50 ಸೆಂ.ಮೀ. ; ಗರಿಷ್ಠ: 5 ಮೀ. (ಗಂಡು) (ಥೈಲ್ಯಾಂಡಿನಲ್ಲಿ 6 ಮೀ.).

**ವಿವರಣೆ :** ಬೃಹತ್ ಗಾತ್ರದ ಕಾಳಿಂಗ ಸರ್ಪದ ದೊಡ್ಡತಲೆಯು ಕುತ್ತಿಗೆಗಿಂತ ಸ್ವಲ್ಪ ಅಗಲವಾಗಿರುತ್ತದೆ. ತಲೆಯ ಹುರುಪೆಗಳ ತುದಿಯಲ್ಲಿ ಕಪ್ಪು ಬಣ್ಣವಿರುತ್ತದೆ. ಹಳದಿಯಿಂದ ದಟ್ಟವಾದ ಆಲಿವ್ ಹಸಿರಿನವರೆಗೆ ಶರೀರದ ಒಟ್ಟು ಬಣ್ಣದಲ್ಲಿ ವ್ಯತ್ಯಾಸವಿರುತ್ತದೆ. ಆದರೆ ಬಾಲವು ಕೆಲವೊಮ್ಮೆ ಕಡು ಕಪ್ಪು ಬಣ್ಣವಿರುತ್ತದೆ. ಶರೀರದ ತಳಭಾಗದ ಬಣ್ಣವು ಮೇಲ್ಭಾಗದ ಬಣ್ಣದಂತೆಯೇ ಇದ್ದು ಸ್ವಲ್ಪ ತಿಳಿಯಾಗಿರುತ್ತದೆ. ಉತ್ತರ ಪ್ರದೇಶ ಮತ್ತು ಒರಿಸ್ಸಾದ ಕಾಳಿಂಗ ಸರ್ಪಗಳ ಬಣ್ಣದ ಸಾಂದ್ರತೆ ಕಡಿಮೆಯಿದ್ದು ತಿಳಿಯಾದ ಬಣ್ಣ ಹೊಂದಿರುತ್ತವೆ. ಆದರಿಂದಾಗಿ ಆ ಕಾಳಿಂಗಗಳ ಬೆನ್ನಿನ ಹಳದಿ ಪಟ್ಟಿಗಳು ಹೆಚ್ಚು ಸ್ಪಷ್ಟವಾಗಿ ಕಾಣುತ್ತವೆ. ಕಾಳಿಂಗ ಸರ್ಪಗಳು ಜಗತ್ತಿನ ವಿಷದ ಹಾವುಗಳಲ್ಲಿಯೇ ಅತ್ಯಂತ ದೊಡ್ಡದಾದ ಹಾವುಗಳು.



ಕಾಳಿಂಗ ಸರ್ಪ

**ವಿತರಣೆ :** ಭಾರತದಲ್ಲಿ ಇವು ಅಪರೂಪದ ಹಾವುಗಳು. ಬಹುತೇಕ ಇವು ಪಶ್ಚಿಮ ಘಟ್ಟಗಳು ಮತ್ತು ಉತ್ತರ ಭಾರತದ ಪರ್ವತಗಳ ಅರಣ್ಯಗಳಿಗೆ ಸೀಮಿತವಾಗಿವೆ. ಇವು ನೀಲಗಿರಿ ಪರ್ವತಗಳು, ಪಳನಿ ಪರ್ವತಗಳು ಮತ್ತು ಪಶ್ಚಿಮ ಘಟ್ಟಗಳಿಂದ ಹಿಡಿದು ಗೋವಾದವರೆಗೆ, ಹಿಮಾಲಯದ ಪರ್ವತಗಳ ಸಾಲಿನಲ್ಲಿ (2000ಮೀ. ಎತ್ತರದವರೆಗೆ) ಪಾಕಿಸ್ತಾನದ ಲಾಹೋರಿನಿಂದ ಹಿಡಿದು ಉತ್ತರ ಭಾರತ ಹಾಗೂ ಅಸ್ಸಾಂವರೆಗೆ ಇರುವ ಅರಣ್ಯಗಳಲ್ಲಿ ಕಂಡುಬರುತ್ತವೆ. ಒರಿಸ್ಸಾ, ಬಿಹಾರ, ಪಶ್ಚಿಮ ಬಂಗಾಳ ಮತ್ತು ಅಂಡಮಾನ್ ದ್ವೀಪಗಳ ಅರಣ್ಯಗಳಲ್ಲಿಯೂ ಕಾಳಿಂಗ ಸರ್ಪಗಳಿವೆ.

**ಆವಾಸ :** ಕಾಳಿಂಗ ಸರ್ಪಗಳು ಸಮುದ್ರಮಟ್ಟದಿಂದ 1200 ಮೀ. ಎತ್ತರದವರೆಗಿನ ಪಶ್ಚಿಮ ಘಟ್ಟಗಳು ಹಾಗೂ ಅಸ್ಸಾಮಿನ ಕಡಿಮೆ ಎತ್ತರದಲ್ಲಿರುವ ಕಾಫಿ ಮತ್ತು ಟೀ ತೋಟಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಕಾಳಿಂಗ ಸರ್ಪಗಳಿಗೆ ಹೆಚ್ಚು ಮಳೆ ಬೀಳುವ ಹಾಗೂ ದಟ್ಟ ಸಸ್ಯರಾಶಿಯಿರುವ ವಿಶಿಷ್ಟ ಪರಿಸರದ ಅಗತ್ಯವಿರುವಂತೆ ಕಾಣುತ್ತದೆ. ಆದರೂ ಸಹ ಅವು ಅರಣ್ಯಗಳಿಗೇ ಸೀಮಿತವಾಗಿಲ್ಲ. ಬಂಗಾಳ (ಸುಂದರವನ), ಒರಿಸ್ಸಾ(ಬಿಟರ್ ಕಾನಿಕ) ಮತ್ತು ಅಂಡಮಾನ್ ದ್ವೀಪಗಳ ಅಳಿವೆಯ ಜೌಗು ಪ್ರದೇಶಗಳಲ್ಲಿಯೂ ಈ ಸರ್ಪಗಳು ವಾಸಿಸುತ್ತವೆ.

**ಸ್ವಭಾವ :** ಈ ಅಮೋಘ ಸರ್ಪದ ಆಕ್ರಮಣಕಾರಿ ಸ್ವಭಾವದ ಬಗ್ಗೆ ಸಾಕಷ್ಟು ಬರೆಯಲಾಗಿದೆ. ಆದರೆ ಇವೆಲ್ಲವೂ ಹೆಚ್ಚಿನ ಮಟ್ಟಿಗೆ ಕಲ್ಪನೆಯೇ ಹೊರತು ಸತ್ಯವಲ್ಲ. ದಕ್ಷಿಣ ಭಾರತ ಮತ್ತು ಅಂಡಮಾನ್‌ಗಳಲ್ಲಿ ನಾವು ಕಾಳಿಂಗ ಸರ್ಪಗಳನ್ನು ನೋಡಿದ್ದೇವೆ. ಅನುಭವದ ಆಧಾರದ ಮೇಲೆ ಹೇಳುವುದಾದರೆ ಇವು ಸಾಧು ಸ್ವಭಾವದ ಸರ್ಪಗಳು, ಆಕ್ರಮಣ ಮಾಡಲು ಇಷ್ಟಪಡುವುದಿಲ್ಲ ಮತ್ತು ಸಾಧ್ಯವಾದಾಗಲೆಲ್ಲ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತವೆ. ಆಫ್ರಿಕಾದ ಹೆಸರಾಂತ ಕ್ಷೇತ್ರ ಸರ್ಪತಜ್ಞರಾದ ಸಿ. ಪಿ. ಜೆ. ಐಯೋನಿಡೆಸ್ ಮತ್ತು ಜೆ. ಎಚ್. ಇ. ಲೀಕಿ ಇವರು ಕಾವು ನಿಡುತ್ತಿದ್ದ 15 ಹೆಣ್ಣು ಕಾಳಿಂಗ ಸರ್ಪಗಳನ್ನು ಹಿಡಿದರು. ಅವರು ಹೇಳುವಂತೆ "ಹಾವುಗಳನ್ನು ಎಳೆದುಕೊಳ್ಳುವ ಕಡ್ಡಿಗಳನ್ನು ಬಳಸುವ ಮೊದಲು 15 ಹೆಣ್ಣು ಕಾಳಿಂಗ ಸರ್ಪಗಳು ಯಾವುದೇ ಆಕ್ರಮಣಕಾರಿಯಲ್ಲವೆಂಬುದನ್ನು ತೋರಿಸಲು ಈ ಪ್ರತ್ಯಕ್ಷ ವೀಕ್ಷಣೆ ಸಹಾಯ ಮಾಡುತ್ತದೆ". ನಿಸರ್ಗದ ನಡುವೆ ನೋಡಲು ಕಾಳಿಂಗ ಸರ್ಪ ನಿಜವಾಗಿಯೂ ಭಯಾನಕವಾಗಿದೆ. ನೋಡಿದ ತಕ್ಷಣ ಕಾಳಿಂಗ ಸರ್ಪ ಮತ್ತು ಮನುಷ್ಯ ಇಬ್ಬರೂ ಅಲ್ಲಿಂದ ಕಾಲ್ತೆಗೆಯಲು ಪ್ರಯತ್ನಿಸುತ್ತಾರೆ. ಗಾಯಗೊಳಿಸಿದಾಗ ಅಥವಾ ನಿರ್ಬಂಧಿಸಿದಾಗ ಕಾಳಿಂಗ ಸರ್ಪವು ಬಾಯ್ತೆರೆದು ಜೋರಾಗಿ ಬುಸುಗುಟ್ಟುತ್ತಾ ಆಕ್ರಮಣ ಮಾಡಿದ ವ್ಯಕ್ತಿಯ ಮೇಲೆರಗಬಹುದು.. ಇತರ ಹಾವುಗಳಿಗೆ ಅಪರೂಪವಾದ ಪ್ರಜ್ಞೆ ಹಾಗೂ ಬುದ್ಧಿವಂತಿಕೆಯಿಂದ ಕಾಳಿಂಗ ಸರ್ಪಗಳು ವರ್ತಿಸುತ್ತವೆ.

**ಸಂತಾನ :** ಭಾರತದ ಕಾಳಿಂಗ ಸರ್ಪಗಳ ಸಂತಾನಾಭಿವೃದ್ಧಿಯ ಸ್ವಭಾವಗಳ ಬಗ್ಗೆ ಸ್ವಲ್ಪವೇ ತಿಳಿದಿದೆ. ಜೂನ್ ತಿಂಗಳಲ್ಲಿ ಅಂಡಮಾನ್ ದ್ವೀಪಗಳ ಬಿದಿರು ಮೆಳೆಯಲ್ಲಿ ಒಂದು ಕಾಳಿಂಗ ಸರ್ಪವು 20 ಮೊಟ್ಟೆಗಳನ್ನು ಕಾಪಾಡುತ್ತಿದ್ದುದನ್ನು ಗುರುತಿಸಲಾಗಿದೆ. ಹೆಣ್ಣು ಕಾಳಿಂಗ ಸರ್ಪಗಳು ಬಿದ್ದಿರುವ ಎಲೆಗಳನ್ನು (ಅನೇಕ ವೇಳೆ ಬಿದಿರು ಎಲೆಗಳು)

ತಮ್ಮ ಮೈಯಿಂದಲೇ ಗುಡಿಸಿ ಗುಡ್ಡೆಮಾಡಿ ಸುಮಾರು 30 ಸೆಂ. ಮೀ. ಎತ್ತರದ ಹಾಗೂ ಶಂಖಾಕೃತಿಯ ಗೂಡನ್ನು ರಚಿಸುತ್ತವೆ. ಗೂಡಿನ ಕೆಳಭಾಗದಲ್ಲಿ ಮೊಟ್ಟೆಗಳನ್ನಿಟ್ಟ ನಂತರ ಹೆಣ್ಣು ಕಾಳಿಂಗ ಸರ್ಪವು ಎಲೆಗಳ ಗುಡ್ಡೆಯ ಮೇಲೆ ಸುಮಾರು ಎರಡು ತಿಂಗಳುಗಳವರೆಗೆ ಸುತ್ತಿಕೊಂಡು ಮೊಟ್ಟೆಗಳು ಒಡೆದು ಮರಿಗಳು ಹೊರಬರುವವರೆಗೂ ರಕ್ಷಣೆ ನೀಡುತ್ತದೆ. ಬಹುಶಃ ಈ ದಿನಗಳಲ್ಲಿ ಹೆಣ್ಣು ಕಾಳಿಂಗ ಸರ್ಪವು ಉಪವಾಸವಿರುತ್ತದೆ. ಆದರೆ ಅದರ ಇರುವಿಕೆಯು ಮುಂಗಸಿ ಮತ್ತು ಉಡಗಳಂತಹ ಪರಭಕ್ಷಕ ಪ್ರಾಣಿಗಳನ್ನು ದೂರವಿಡುತ್ತದೆ. ಹೆಬ್ಬಾವು ಮತ್ತು ಇತರೆ ಹಾವುಗಳು ಮೊಟ್ಟೆಗಳ ಸಮೂಹವನ್ನು ಶರೀರದಿಂದ ಸುತ್ತಿಕೊಂಡು ಕಾವು ನೀಡುತ್ತವಾದರೂ ಪ್ರಪಂಚದಲ್ಲಿಯೇ ಗೂಡುಗಳನ್ನು ನಿರ್ಮಿಸುವ ಏಕೈಕ ಹಾವುಗಳೆಂದರೆ ಕಾಳಿಂಗ ಸರ್ಪಗಳು.

**ಆಹಾರ :** ಕಾಳಿಂಗ ಸರ್ಪಗಳು ಪ್ರಧಾನವಾಗಿ ಹಾವುಗಳನ್ನು ಮತ್ತು ಕೆಲವೊಮ್ಮೆ ಹಲ್ಲಿಗಳನ್ನು ತಿನ್ನುತ್ತವೆ. ಕೇರೆಹಾವು ಮತ್ತು ಚೌಕಳಿ ಬೆನ್ನೇಣು ಹಾವುಗಳಂತಹ ದೊಡ್ಡಹಾವುಗಳೇ ಇದರ ಪ್ರಮುಖ ಆಹಾರವಾಗಿರುವಂತೆ ಕಾಣುತ್ತದೆ. ಚೆನ್ನೈನ ಸರ್ಪವನದಲ್ಲಿ 4 ಮೀಟರ್ ಉದ್ದದ ಗಂಡು ಕಾಳಿಂಗ ಸರ್ಪವು ನಾಲ್ಕು ತಿಂಗಳುಗಳ ಕಾಲದಲ್ಲಿ 1.5 ಮೀಟರ್ ಉದ್ದವಿರುವ 15 ಕೇರೆ ಹಾವುಗಳನ್ನು ತಿಂದುಹಾಕಿತು. ಅದು ಕೇರೆಹಾವುಗಳನ್ನು ಸಾಯಿಸಲು ಸರಾಸರಿ 15 ನಿಮಿಷಗಳನ್ನು ತೆಗೆದುಕೊಂಡಿತು. ಅದು ಕೇರೆಹಾವುಗಳ ಗಂಟಲನ್ನು ಕಚ್ಚಿ ಬಹಶಃ ವಿಷ ಉಣಿಸುವ ಮೂಲಕ ಉಸಿರುಗಟ್ಟಿಸುತ್ತದೆಂದು ತೋರುತ್ತದೆ.

**ಪರಿಸ್ಥಿತಿ :** ಅವು ವಾಸಿಸುವ ಅರಣ್ಯ ಪ್ರದೇಶಗಳಲ್ಲಿಯೇ ಕಾಳಿಂಗ ಸರ್ಪಗಳು ಅಪರೂಪ. ಇಂದಂತೂ ಅವುಗಳ ಭವಿಷ್ಯ ಅನಿಶ್ಚಿತವಾಗಿದೆ. ಕಾಫಿ, ಟೀ ತೋಟಗಳಲ್ಲಿ ಅವನ್ನು ಕಂಡಾಗ ಜನ ಸಾಮಾನ್ಯವಾಗಿ ಕೊಲ್ಲುತ್ತಾರೆ. ಭಾರತದಲ್ಲಿ ಅವನ್ನು ವಿನಾಶದ ಅಂಚಿನಲ್ಲಿರುವ ಪ್ರಭೇದಗಳೆಂದು ಪರಿಗಣಿಸಬೇಕು ಮತ್ತು ರಕ್ಷಿಸಬೇಕು.

**ವಿಷ :** ಕಾಳಿಂಗಸರ್ಪದ ವಿಷವು ನಾಗರಹಾವಿನ ವಿಷಕ್ಕಿಂತ ಕಡಿಮೆ ಪರಿಣಾಮ ಉಂಟುಮಾಡುವಂಥದು. ಆದರೆ ಅದರ ವಿಷಗ್ರಂಥಿಗಳು ಗಾತ್ರದಲ್ಲಿ ದೊಡ್ಡದಾಗಿದ್ದು 6 ಸಿ. ಸಿ. ವರೆಗೆ ವಿಷವನ್ನು ಹೊಂದಿರುತ್ತವೆ. ಇಷ್ಟು ಪ್ರಮಾಣದ ವಿಷವು ಒಂದು ಆನೆಯನ್ನು ಸಾಯಿಸಬಲ್ಲದು. ಥೈಲ್ಯಾಂಡಿನಲ್ಲಿ ಮಾತ್ರ ಈ ಹಾವಿನ ಕಡಿತದ ಚಿಕಿತ್ಸೆಗೆ ಬೇಕಾದ ಪ್ರತಿವಿಷ ದೊರೆಯುತ್ತದೆ. ಕಾಳಿಂಗ ಸರ್ಪದ ಕಡಿತದಿಂದ ಉಂಟಾದ ಸಾವಿನ ಏಕೈಕ ಅಧಿಕೃತ ವರದಿಯೆಂದರೆ ಇಂಗ್ಲೆಂಡಿನ ಪ್ರಜೆಯಾದ ಶ್ರೀ ಸ್ಲೇಟರ್‌ನ ಸಾವಿನ ಪ್ರಕರಣ. ಬಿಸಿಲು ಕಾಯಿಸಿಕೊಳ್ಳುತ್ತಿದ್ದ ಕಾಳಿಂಗ ಸರ್ಪದ ತಲೆಯ ಮೇಲೆ ಆತ ಮೂರ್ಖತನದಿಂದ ಕಾಲಿಟ್ಟು ಮೊಳಕಾಲಿನ ಮೇಲ್ಭಾಗಕ್ಕೆ ಕಡಿಸಿಕೊಂಡು ಮರಣಹೊಂದಿದ. (ಬಾಂಬೆ ನೇಚುರಲ್ ಹಿಸ್ಟರಿ ಸಂಸ್ಥೆಯ ಪತ್ರಿಕೆ, ಸಂಪುಟ 30, ಪುಟ 706).

# 27. ಕೊಕ್ಕೆ ಮೂಗಿನ ಕಡಲಹಾವು

*ಎನ್‌ಹೈಡ್ರೀನಾ ಶಿಸ್ಟೋಸ (Enhydrina schistosa)*

**ವಿಶಿಷ್ಟ ಲಕ್ಷಣಗಳು :** ಮಧ್ಯಮ ಗಾತ್ರ, ಒರಟು ಹಾಗೂ ಮಸುಕಾದ ಹುರುಪೆಗಳು, ಚಪ್ಪಟೆಯಾದ ಶರೀರ ; ಬಾಲವು ಪೂರ್ಣವಾಗಿ ಚಪ್ಪಟೆಯಾಗಿದ್ದು ದೋಣಿಯ ಹುಟ್ಟಿನಂತಿರುತ್ತದೆ.

**ಸರಾಸರಿ ಉದ್ದ :** 60 ಸೆಂ. ಮೀ. ; ಹುಟ್ಟಿದಾಗ : 15 ಸೆಂ. ಮೀ. ; ಗರಿಷ್ಠ : 1.5 ಮೀ.

**ವಿವರಣೆ :** ಕೊಕ್ಕೆಮೂಗಿನ ಕಡಲಹಾವು ಸ್ವಲ್ಪ ಚಿಕ್ಕದಾದರೂ ದಪ್ಪನೆಯ ಶರೀರ ಹೊಂದಿದೆ. ಅದರ ಮೂಗು ಚಚ್ಚೌಕವಿದ್ದು ಮೇಲ್ದವಡೆಯ ತುದಿಯು ಕೆಳದವಡೆಯ ಮೇಲೆ ಕೊಕ್ಕೆಯಂತೆ ಮುಂಚಾಚಿದೆ. ಶರೀರವು ಒಟ್ಟಾರೆ ಬೂದು ಬಣ್ಣವಿದೆ. ಬೆನ್ನಿನ ಮೇಲೆ ಕಪ್ಪುಬಣ್ಣದ ದುಂಡು ಮಚ್ಚೆಗಳಿವೆ. ಹುರುಪೆಗಳು ಒರಟಾಗಿ ತರಿತರಿಯಾಗಿರುತ್ತವೆ. ಶರೀರದ ಕೊನೆಯ ಅರ್ಧಭಾಗ ಮತ್ತು ಕೆಳಭಾಗಗಳು ಬಿಳುಪಾಗಿರುತ್ತವೆ. ಬಾಲ ಚಪ್ಪಟೆಯಾಗಿದ್ದು ದೋಣಿಯ ಹುಟ್ಟಿನಂತಿದೆ.

**ವಿತರಣೆ :** ಭಾರತದ ಕರಾವಳಿ ಮತ್ತು ಕಡಲದ್ವೀಪಗಳು. ಭಾರತದ ಕಡಲುಗಳಲ್ಲಿ ಕಂಡುಬರುವ 20ಕ್ಕೂ ಹೆಚ್ಚು ರೀತಿಯ ಕಡಲ ಹಾವುಗಳಲ್ಲಿ ಕೊಕ್ಕೆ ಮೂಗಿನ ಕಡಲ ಹಾವು ಅತ್ಯಂತ ಸಾಮಾನ್ಯವಾದ ಹಾವು.

**ಆವಾಸ :** ಇವು ಸಮುದ್ರ ತೀರಗಳಲ್ಲಿರುವುದನ್ನು ಇಷ್ಟಪಡುತ್ತವೆ. ಕೆಲವು ಋತುಗಳಲ್ಲಿ ಆಳವಾದ ಸಮುದ್ರದಲ್ಲಿಯೂ ಇರುತ್ತದೆ. ಹೀಗಾಗಿ ಕೆಲವೊಮ್ಮೆ ಮೀನಿನ ಬಲೆಯೊಳಗೆ ಇವು ಆಕಸ್ಮಿಕವಾಗಿ ಸಿಕ್ಕಿಹಾಕಿಕೊಳ್ಳುವುದುಂಟು.

**ಸ್ವಭಾವ :** ಒಟ್ಟಾರೆ ಕಡಲ ಹಾವುಗಳ ಸ್ವಭಾವದ ಬಗ್ಗೆ ನಮಗೆ ಸ್ವಲ್ಪವೇ ತಿಳಿದಿದೆ. ಚೆನ್ನೈನ ಸರ್ಪವನದಲ್ಲಿ ಕೆಲವು ಕಡಲಹಾವುಗಳನ್ನು ಸಾಕಲಾಗಿದೆ. ಅವು ಹಗಲು-ರಾತ್ರಿ ಎರಡು ಹೊತ್ತೂ ಚಟುವಟಿಕೆಯಿಂದಿದ್ದು ವಿರಮಿಸುವುದು ಅಪರೂಪವೆಂಬಂತೆ ತೋರುತ್ತದೆ. ಅವು ಎಚ್ಚರವಿರುವಾಗ ಸದಾ ಈಜಾಡುತ್ತಿರುತ್ತವೆ. ಅವು ಸಮುದ್ರದಲ್ಲಿ 100 ಮೀಟರುಗಳಷ್ಟು ಆಳಕ್ಕೆ ಹೋಗಬಲ್ಲವು ಮತ್ತು ನೀರಿನಲ್ಲಿ ಗರಿಷ್ಠ 5 ಗಂಟೆಗಳವರೆಗೆ ಮುಳುಗಿರಬಲ್ಲವು. ಹೆಚ್ಚಾದ ಲವಣಾಂಶವನ್ನು ವಿಸರ್ಜಿಸುವ ಗ್ರಂಥಿಗಳು ಕಡಲಹಾವುಗಳಿಗಿವೆ. ಬೆಸ್ತರು ಈ ಹಾವುಗಳನ್ನು ಕಂಡರೆ ಭಯಪಡುವುದಿಲ್ಲ. ಬಲೆಯಲ್ಲಿ ಈ ಹಾವುಗಳು ಸಿಕ್ಕಾಗ ಇವನ್ನು ಬಾಲಹಿಡಿದು ಮೇಲಕ್ಕೆತ್ತಿ ಮತ್ತೆ ಸಮುದ್ರಕ್ಕೆ ಎಸೆಯುತ್ತಾರೆ. ಇತರೆ ಕಡಲಹಾವುಗಳಂತೆ ಇವು ಕಚ್ಚುವುದು ಅಪರೂಪ. ಇವುಗಳ ಕಡಿತದಿಂದ ಉಂಟಾದ ಸಾವಿನ ಪ್ರಕರಣಗಳು ಕಡಿಮೆ. ಸಮುದ್ರದಲ್ಲಿ ಈಜಾಡುವ ವ್ಯಕ್ತಿಗೆ ಈ ಹಾವು ಕಚ್ಚಿದ ವರದಿ ಭಾರತದಲ್ಲಿಲ್ಲ.

**ಸಂತಾನ :** ನೆಲ ಹಾಗೂ ನೀರುಗಳ ಉಭಯಚರ ಕಡಲಹಾವನ್ನು ಬಿಟ್ಟರೆ ಬೇರೆಲ್ಲ ಕಡಲಹಾವುಗಳು 2 ರಿಂದ 5 ಹಾವಿನಮರಿಗಳನ್ನು ಹಾಕುತ್ತವೆ. (ಚೆನ್ನೈನ ಸರ್ಪವನದ



ಕೊಕ್ಕೆ ಮೂಗಿನ ಕಡಲ ಹಾವು

ಚಿಕ್ಕತಲೆಯ ಕಡಲಹಾವು ಏಪ್ರಿಲ್ 24ರಂದು 4 ಮರಿಗಳಿಗೆ ಜನ್ಮ ನೀಡಿತು).

**ಆಹಾರ :** ಕೊಕ್ಕೆ ಮೂಗಿನ ಕಡಲ ಹಾವಿನ ಪ್ರಮುಖ ಆಹಾರ ಮೀನು. ಶೀಘ್ರವಾಗಿ ಚಲಿಸುವ ಈಡುಜೀವಿಗಳನ್ನು ಈ ಹಾವುಗಳು ತಮ್ಮ ಅತಿ ಪ್ರಭಾವಶಾಲಿ ವಿಷದಿಂದ (ಶೀಘ್ರವಾಗಿ) ನಿಶ್ಚೇಷ್ಟಿತಗೊಳಿಸುತ್ತವೆ.

**ಪರಿಸ್ಥಿತಿ :** ಸಮುದ್ರಗಳಲ್ಲಿ ಕೊಕ್ಕೆಮೂಗಿನ ಕಡಲಹಾವುಗಳು ಸಾಮಾನ್ಯವಾಗಿ ವಿನಾಶಕ್ಕೊಳಗಾಗಿಲ್ಲ. ಹಾಂಕಾಂಗ್ ಮತ್ತು ಸಿಂಗಾಪುರಗಳ ಸಮೀಪವಿರುವ ಉಭಯಚರ ಕಡಲಹಾವುಗಳನ್ನು ಮಾಂಸಕ್ಕಾಗಿ ಸಾವಿರಾರು ಸಂಖ್ಯೆಗಳಲ್ಲಿ ಕೊಲ್ಲಲಾಗುತ್ತಿದೆ. ಇತರೆ ಕೆಲವು ಪ್ರಭೇದಗಳನ್ನು ಚರ್ಮಕ್ಕಾಗಿ ಬೇಟೆಯಾಡುತ್ತಾರೆ.

**ಸೂಚನೆಗಳು :** ಉಭಯಚರ ಕಡಲಹಾವುಗಳು ಮೊಟ್ಟೆಯಿಡುತ್ತವೆ. ಇವು ಕೆಲವೊಮ್ಮೆ ಮೊಟ್ಟೆಯಿಡಲು ಚಿಕ್ಕ ಶಿಲಾದ್ವೀಪಗಳ ತೀರಪ್ರದೇಶಕ್ಕೆ ಸಾವಿರಾರು ಸಂಖ್ಯೆಯಲ್ಲಿ ಬರುತ್ತವೆ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಇದು ಸಾಮಾನ್ಯವಾಗಿ ಕಂಡುಬರುವ ಹಾವು. ಚಿಕ್ಕ ದ್ವೀಪಗಳಲ್ಲಿ ಬಿಸಿಲು ಕಾಸಲು ಹಾಗೂ ಮೊಟ್ಟೆಯಿಡಲು ಕಡಲತೀರಕ್ಕೆ ಬರುತ್ತದೆ.

**ವಿಷ:** ಕೊಕ್ಕೆಮೂಗಿನ ಕಡಲಹಾವಿನ ವಿಷವು ನಾಗರಹಾವಿನ ವಿಷಕ್ಕಿಂತ ನಾಲ್ಕರಿಂದ ಎಂಟು ಪಟ್ಟು ವಿಷಕಾರಿಯೆಂದು ಹೇಳಲಾಗುತ್ತದೆ. ಇತರೆ ಕಡಲಹಾವುಗಳ ವಿಷವೂ ಹೆಚ್ಚು ಕಡಿಮೆ ಇಷ್ಟೇ ವಿಷಕಾರಿ. ಆದರೆ ಸಾಮಾನ್ಯವಾಗಿ ಈ ಹಾವು ಕಚ್ಚುವುದಿಲ್ಲ. ಜೊತೆಗೆ ಮಂಡಲ ಹಾಗೂ ನಾಗರಹಾವುಗಳಿಗೆ ಹೋಲಿಸಿದಾಗ ಇವುಗಳ ವಿಷಚುಚ್ಚುವ ಅಂಗಗಳ ದಕ್ಷತೆ ಕಡಿಮೆ. ಕಡಲ ಹಾವುಗಳು ಕಚ್ಚಿದಾಗ ಬೇಕಾದ ಪ್ರತಿವಿಷವನ್ನು ಜಪಾನ್ ಮತ್ತು ಆಸ್ಟ್ರೇಲಿಯಾಗಳಲ್ಲಿ ತಯಾರಿಸುತ್ತಾರೆ. ಭಾರತದಲ್ಲಿ ಇದರ ಪ್ರತಿವಿಷ ದೊರೆಯುವುದಿಲ್ಲ.

*ವಿಷಕಾರಿ*

# 28. ರಸೆಲ್ಸ್ ಮಂಡಲ ಹಾವು

*ವೈಪೆರ ರಸೆಲಿ (Vipera russellii)*

**ವಿಶಿಷ್ಟ ಲಕ್ಷಣಗಳು :** ಮಧ್ಯಮದಿಂದ ಬೃಹತ್ ಗಾತ್ರದ ಶರೀರ ; ಸ್ಪಷ್ಟವಾದ ಏಣುಗಳಿರುವ ಹುರುಪೆಗಳು ; ಹೊಳೆಯುವ ಸರಪಳಿಯಾಕಾರದ ವಿಶಿಷ್ಟ ವಿನ್ಯಾಸ ; ತ್ರಿಕೋಣಾಕಾರದ ದೊಡ್ಡ ತಲೆ.

**ಸರಾಸರಿ ಉದ್ದ:** 1ಮೀ. ; **ಹುಟ್ಟಿದಾಗ:** 24 ಸೆಂ. ಮೀ. ; **ಗರಿಷ್ಠ :** 1.8 ಮೀ. (ಗಂಡು).

**ವಿವರಣೆ :** ರಸೆಲ್ಸ್ ಮಂಡಲಗಳು ದಪ್ಪನೆಯ ಶರೀರದ ಒರಟು ಹುರುಪೆಗಳ, ಉದ್ದವಾದ ಕಣ್ಣಿನ ಪಾಪೆಯಿರುವ ಹಾಗೂ ಸಾಮಾನ್ಯವಾಗಿ ಪ್ರಜ್ವಲಿಸುವ ಬಣ್ಣಗಳ ವಿನ್ಯಾಸವಿರುವ ಹಾವುಗಳು. ಸಾಮಾನ್ಯವಾಗಿ ಇವುಗಳ ಶರೀರದ ಬಣ್ಣ ಕಂದು ಅಥವಾ



ರಸೆಲ್ಸ್ ಮಂಡಲ ಹಾವು

ಹಳದಿಯಿರುತ್ತದೆ. ಶರೀರದ ಮೇಲ್ಭಾಗದಲ್ಲಿ ದುಂಡನೆಯ ಕಪ್ಪು ಮಚ್ಚೆಗಳಿದ್ದು ಅವುಗಳ ಅಂಚು ಬಿಳಿ ಮತ್ತು ಕಪ್ಪು ಬಣ್ಣ ಹೊಂದಿರುತ್ತದೆ. ಶರೀರದ ತಳಭಾಗವು ಪಶ್ಚಿಮ ಭಾರತದ ಹಾವುಗಳಲ್ಲಿ ಬಿಳುಪಾಗಿದ್ದು, ಆಗ್ನೇಯ ಭಾರತದ ಹಾವುಗಳಲ್ಲಿ ಸ್ವಲ್ಪ ಮಟ್ಟಿನ ಚುಕ್ಕೆಗಳು ಮತ್ತು ಈಶಾನ್ಯ ಭಾರತದ ಹಾವುಗಳಲ್ಲಿ ದಟ್ಟವಾದ ಚುಕ್ಕೆಗಳಿರುತ್ತವೆ. ಸಾಮಾನ್ಯವಾಗಿ ಈ ಹಾವುಗಳ ಬಣ್ಣದಲ್ಲಿ ವ್ಯತ್ಯಾಸವಿರುತ್ತದೆ. ಆದ್ದರಿಂದ ಈ ಹಾವುಗಳನ್ನು ಗುರುತಿಸುವ ಮುಖ್ಯ ಚಿಹ್ನೆಗಳೆಂದರೆ ದಪ್ಪ ಹಾಗೂ ಗಿಡ್ಡ ಶರೀರ ; ತ್ರಿಕೋಣಾಕಾರದ ತಲೆ ಮತ್ತು ಕ್ರಮಬದ್ಧವಾದ ಸರಪಳಿಯಾಕಾರದ ವಿನ್ಯಾಸ. ರಸೆಲ್ಸ್ ಮಂಡಲ ಹಾವುಗಳು ದಪ್ಪಗಿದ್ದು ನಿರುಪದ್ರವಿ ಮರಳು ಹೆಬ್ಬಾವುಗಳನ್ನು ಹೋಲುತ್ತವೆ. ಮರಳ ಹೆಬ್ಬಾವುಗಳು ಚಿಕ್ಕ ಮೊಂಡುಬಾಲ ಹಾಗೂ ಅಸಮವಾದ ಮಚ್ಚೆಗಳನ್ನು ಹೊಂದಿವೆ. ಬೆನ್ನಿನ ಮೇಲೆ ಕಂಡುಬರುವ ಪ್ರಕಾಶಮಾನವಾದ ಹಾಗೂ ಅನುಕ್ರಮದಲ್ಲಿರುವ ಮಚ್ಚೆಗಳ ಗುರುತಿನಿಂದ ರಸೆಲ್ಸ್ ಮಂಡಲಗಳನ್ನು ಸುಲಭವಾಗಿ ಗುರುತಿಸಬಹುದು. ಭಾರತದಲ್ಲಿರುವ ನಾಲ್ಕು ದೊಡ್ಡ ವಿಷಸರ್ಪಗಳ ಜಾತಿಗಳಲ್ಲಿ ರಸೆಲ್ಸ್ ಮಂಡಲ ಹಾವುಗಳೂ ಸೇರಿವೆ. ಭಾರತದ ಮತ್ತೊಂದು ದೊಡ್ಡ ವಿಷಸರ್ಪವೆಂದರೆ ತಲೆ ತಪ್ಪಿಸಿಕೊಳ್ಳುವ ಮಂಡಲ ಹಾವು. ಇದು ದಪ್ಪ ಶರೀರದ ಕಂದು ಬಣ್ಣದ ಹಾವು 1.5 ಮೀಟರುಗಳವರೆಗೆ ಬೆಳೆಯುತ್ತದೆ ಮತ್ತು ಕಾಶ್ಮೀರದ ಕೆಲವು ಭಾಗಗಳಲ್ಲಿ ಕಂಡುಬರುತ್ತದೆ.

**ವಿತರಣೆ :** ಭಾರತದ ಆದ್ಯಂತ ಇರುವ ಬೆಟ್ಟ ಹಾಗೂ ಮೈದಾನ ಪ್ರದೇಶಗಳಲ್ಲಿ ಸಮುದ್ರ ಮಟ್ಟದಿಂದ 3000 ಮೀಟರು ಎತ್ತರದವರೆಗೆ ಈ ಹಾವು ಕಂಡುಬರುತ್ತದೆ.

**ಆವಾಸ :** ಬೆಟ್ಟಗುಡ್ಡಗಳಲ್ಲಿಯೂ, ಮೈದಾನಗಳಲ್ಲಿ ಕೃಷಿ ಭೂಮಿ ಸುತ್ತ ಇರುವ ಕುರುಚಲು ಕಾಡುಗಳಲ್ಲಿಯೂ ರಸೆಲ್ಸ್ ಮಂಡಲ ಹಾವುಗಳು ವಾಸಿಸುತ್ತವೆ. ಹೆಚ್ಚು ಧಗೆಯಿರುವ ದಿನಗಳಲ್ಲಿ ಇವು ಹುತ್ತ ಮತ್ತು ಇಲಿ ಬಿಲಗಳಲ್ಲಿ ವಾಸಿಸುತ್ತವೆ. ಕಲ್ಲು ಪೊಟರೆಗಳು, ದಪ್ಪ ಎಲೆಗಳ ಮತ್ತು ಹುಲ್ಲುಗಳಿರುವ ಪ್ರದೇಶಗಳು ಮತ್ತು ಕಳ್ಳಿ, ಕತ್ತಾಳೆಯಿರುವ ಪ್ರದೇಶಗಳಲ್ಲಿ ಈ ಹಾವುಗಳು ಸಾಮಾನ್ಯವಾಗಿವೆ. ಇವುಗಳಿಗೆ ಪ್ರಿಯವಾದ ವಾಸಸ್ಥಳಗಳಲ್ಲಿ ಸರ್ವವ್ಯಾಪಿ ಪೊದೆಗಳಾದ ಕಾರೆಗಿಡ ಮತ್ತು ಕತ್ತಾಳೆ ಗಿಡಗಳೂ ಸೇರಿವೆ.

**ಸ್ವಭಾವ :** ರಸೆಲ್ಸ್ ಮಂಡಲ ಹಾವುಗಳು ನೋಡಲು ಸೋಮಾರಿಗಳಂತೆ ಕಂಡರೂ, ಕೆಣಕಿದಾಗ ಸ್ವಲ್ಪ ಹೊತ್ತು ಅತಿ ವೇಗವಾಗಿ ಚಲಿಸಬಲ್ಲವು. ಅವು ಜೋರಾಗಿ ಬುಸುಗುಟ್ಟುತ್ತವೆ ಮತ್ತು ರಕ್ಷಣೆಗೆಂದು ಕಚ್ಚುತ್ತವೆ. ಆದರೂ ಅವು ಪುಕ್ಕಲು ಸ್ವಭಾವದ ಹಾವುಗಳು. ಬೇಗ ತಪ್ಪಿಸಿಕೊಳ್ಳುವಲ್ಲಿ ಪ್ರಾವೀಣ್ಯತೆ ಪಡೆದಿರುವ ನಾಗರ ಹಾಗೂ ನೀಳ ಶರೀರದ ಇತರೆ ಹಾವುಗಳಂತೆ ಮಂಡಲಗಳು ಮನುಷ್ಯನ ಆವಾಸದ ಬಳಿ ಜೀವಿಸುವುದಿಲ್ಲ. ಹೆಚ್ಚಿನ ಮಟ್ಟಿಗೆ ತೋಟ, ಎಸ್ಟೇಟುಗಳಲ್ಲಿ ಕೃಷಿ ಕಾರ್ಮಿಕರು ತಮಗರಿವಿಲ್ಲದೆ ದಟ್ಟವಾದ ಪೊದೆಗಳಲ್ಲಿ ಕೈಕಾಲುಗಳನ್ನಿಟ್ಟಾಗ ಅಥವಾ ಕತ್ತಲೆಯಲ್ಲಿ ಮಂಡಲಹಾವನ್ನು ತುಳಿದಾಗ ಈ ಹಾವಿನಿಂದ ಕಡಿಸಿಕೊಳ್ಳುತ್ತಾರೆ.

**ಸಂತಾನ :** ಪ್ರಧಾನವಾಗಿ ಮೇ–ಜುಲೈ ತಿಂಗಳುಗಳಲ್ಲಿ ಹೆಣ್ಣುಹಾವು 20 ರಿಂದ 40 ಮರಿಗಳನ್ನು ಹಾಕುತ್ತದೆ. ಇವು ತಂದೆ–ತಾಯಿಗಳಿಗಿಂತ ಉಜ್ವಲವಾದ ಪಡಿಯಚ್ಚುಗಳು.

**ಆಹಾರ :** ಬಂಧನದಲ್ಲಿರುವಾಗ ಮರಿಮಂಡಲ ಹಾವುಗಳು ಸ್ವಜಾತಿ ಭಕ್ಷಕಗಳು. ಮರಿಮಂಡಲಗಳು ಇತರೆ ಹಾವು, ಹಲ್ಲಿ, ಇಲಿ, ನೆಲದ ಏಡಿ ಮತ್ತು ಬಹುಶಃ ಚೇಳು ಮತ್ತು ಇತರೆ ಸಂಧಿಪದಿಗಳನ್ನು ತಿನ್ನುತ್ತವೆ. ಪ್ರೌಢ ಮಂಡಲಗಳು ದಂಶಕಗಳನ್ನಷ್ಟೇ ತಿನ್ನುವಂತೆ ಕಾಣುತ್ತದೆ. ಅಪರೂಪಕ್ಕೆ ಪಕ್ಷಿಗಳನ್ನೂ ಹಿಡಿದು ತಿನ್ನಬಹುದು. ದಕ್ಷಿಣ ಭಾರತದಲ್ಲಿ ಇವು ಪ್ರಧಾನವಾಗಿ ದೊಡ್ಡಿಲಿಗಳನ್ನು ತಿನ್ನುತ್ತವೆ.
**ಪರಿಸ್ಥಿತಿ :** ದಕ್ಷಿಣ ಭಾರತದಲ್ಲಿ ರಸೆಲ್ಸ್ ಮಂಡಲ ಹಾವುಗಳು ಚರ್ಮ ಉದ್ಯಮದ ಮುಖ್ಯ ಸಂಪನ್ಮೂಲಗಳಾಗಿವೆ. ವರ್ಷದ ಎಲ್ಲ ಕಾಲಗಳಲ್ಲಿಯೂ ಇವನ್ನು ಚರ್ಮಕ್ಕಾಗಿ ಸಂಗ್ರಹಿಸುವುದರಿಂದ ಕೆಲವು ಪ್ರದೇಶಗಳಲ್ಲಿ ಈ ಹಾವುಗಳು ಸಂಪೂರ್ಣವಾಗಿ ನಾಶವಾಗಿವೆ.
**ವಿಷ :** ಭಾರತದ ವಿಷಕಾರಿ ಹಾವುಗಳಲ್ಲಿ ಈ ಹಾವಿನ ಕಡಿತವು ಅತ್ಯಂತ ಅಪಾಯಕಾರಿಯೆಂದು ಪರಿಗಣಿಸಲಾಗಿದೆ. ಈ ಹಾವಿನ ಕಡಿತಕ್ಕೆ ತುರ್ತಾಗಿ ಪ್ರತಿವಿಷ ಚಿಕಿತ್ಸೆ ನೀಡಬೇಕು. ಅತ್ಯಂತ ಪ್ರಭಾವಶಾಲಿಯಾದ ವಿಷವು ರಕ್ತದ ಮೇಲೆ ಪರಿಣಾಮ ಉಂಟುಮಾಡುತ್ತದೆ. ರಕ್ತ ಹೆಪ್ಪುಗಟ್ಟುವುದನ್ನು ನಿಯಂತ್ರಿಸಲು ಮತ್ತು ರಕ್ತಕ್ಕೆ ಸಂಬಂಧಿಸಿದ ಅಧ್ಯಯನಕ್ಕಾಗಿ ಈ ಹಾವಿನ ವಿಷವನ್ನು ವೈದ್ಯಕೀಯ ಕ್ಷೇತ್ರದಲ್ಲಿ ಬಳಸುತ್ತಾರೆ.

*ವಿಷಕಾರಿ*

# 29. ಗರಗಸ ಹುರುಪೆಗಳ ಮಂಡಲ ಹಾವು (ಮಿಡಿನಾಗರ–ಕಲ್ಲುಹಾವು)

*ಎಕಿಸ್ ಕ್ಯಾರಿನೇಟಸ್ (Echis carinatus)*

**ವಿಶಿಷ್ಟ ಲಕ್ಷಣಗಳು :** ಪುಟಾಣಿ ಶರೀರ ; ದೊಡ್ಡ ಏಣುಗಳಿರುವ ಹುರುಪೆಗಳು ; ಕುತ್ತಿಗೆಗಿಂತ ಅಗಲವಾದ ತಲೆ ; ಮಾಸಲು ಬಣ್ಣ ; ತಲೆಯ ಮೇಲೆ ಬಾಣದ ತುದಿಯ ಸ್ಪಷ್ಟವಾದ ಗುರುತು.
**ಸರಾಸರಿ ಉದ್ದ:** ದಕ್ಷಿಣ ಭಾರತ ; 30 ಸೆಂ. ಮೀ. ; ಉತ್ತರ ಭಾರತ : 50 ಸೆಂ. ಮೀ. ; ಹುಟ್ಟಿದಾಗ : 8 ಸೆಂ. ಮೀ. ; ಗರಿಷ್ಠ : 80 ಸೆಂ. ಮೀ.
**ವಿವರಣೆ :** ದಪ್ಪ ಶರೀರ, ಕುತ್ತಿಗೆಗಿಂತ ಅಗಲವಾದ ತಲೆ, ದೊಡ್ಡ ಕಣ್ಣುಗಳುಳ್ಳ ಹಾಗೂ ಒರಟು ಹುರುಪೆಗಳಿರುವ ಹಾವು. ಹುರುಪೆಗಳ ಏಣುಗಳು ದೊಡ್ಡದಾಗಿವೆ. ಶರೀರವು ಕಂದು, ಬೂದು ಅಥವಾ ಮರಳಿನ ಬಣ್ಣವಿದ್ದು ಬೆನ್ನಿನ ಮೇಲೆ ಅಡ್ಡಾದಿಡ್ಡಾಗಿ ಕಪ್ಪು ಬಣ್ಣದ ವಿನ್ಯಾಸವಿರುತ್ತದೆ. ತಲೆಯ ಮೇಲೆ ಬಾಣದ ಅಥವಾ ಶಿಲುಬೆಯ ಸ್ಪಷ್ಟವಾದ ಗುರುತಿದೆ. ಶರೀರದ ತಳಭಾಗವು ಹಳದಿ ಚುಕ್ಕೆಗಳಿರುವ ಬಿಳಿಬಣ್ಣವನ್ನು ಹೊಂದಿರುತ್ತದೆ. ಬಾಲ ತುಂಡು ಹಾಗೂ ದಪ್ಪ. ನಾಲ್ಕು ಪ್ರಮುಖ ವಿಷಸರ್ಪಗಳಲ್ಲಿ, ಗರಗಸ



ಗರಗಸ ಹುರುಪೆಗಳ ಮಂಡಲ ಹಾವು

ಹುರುಪೆಗಳ ಮಂಡಲ ಹಾವು ಅತಿ ಚಿಕ್ಕದು. ದಕ್ಷಿಣ ಭಾರತದಲ್ಲಿ ಇವುಗಳ ಪುಟಾಣಿ ಶರೀರದಿಂದಾಗಿ ಮನುಷ್ಯನಿಗೆ ಹೆಚ್ಚೇನೂ ಭಯ ಉಂಟುಮಾಡುವುದಿಲ್ಲ. ಆದರೆ ಉತ್ತರ ಭಾರತದ ಹಾವು ಸಾಕಷ್ಟು ದೊಡ್ಡದಿದ್ದು ಅಪಾಯಕಾರಿ.

**ವಿತರಣೆ :** ಭಾರತದಾದ್ಯಂತ, ಬಹುಮಟ್ಟಿಗೆ ಮೈದಾನ ಪ್ರದೇಶಗಳಲ್ಲಿ ಈ ಹಾವುಗಳಿವೆ. ವಾಯವ್ಯ ಭಾರತದ ಬೆಟ್ಟಗಳಲ್ಲಿ 2000 ಮೀಟರ್ ಎತ್ತರದವರೆಗೆ ಗರಗಸ ಹುರುಪೆಗಳ ಮಂಡಲ ಹಾವುಗಳಿರುವುದು ವರದಿಯಾಗಿದೆ. ಮಹಾರಾಷ್ಟ್ರದ ರತ್ನಗಿರಿ, ಪಂಜಾಬ್, ರಾಜಾಸ್ಥಾನ, ತಮಿಳುನಾಡು ಮತ್ತು ಆಂಧ್ರಪ್ರದೇಶದ ಕೆಲವು ಪ್ರದೇಶಗಳಲ್ಲಿ ಈ ಹಾವುಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

**ಆವಾಸ :** ಮೈದಾನದ ಒಣ ಮರಳು ಅಥವಾ ಕಲ್ಲು ರಾಶಿಗಳಿರುವ ಪ್ರದೇಶಗಳು, ದಟ್ಟವಾದ ಅರಣ್ಯ ಪ್ರದೇಶಗಳಲ್ಲಿ ಮತ್ತು ಸಾಮಾನ್ಯವಾಗಿ ಎತ್ತರದ ಬೆಟ್ಟಗಳಲ್ಲಿ ಈ ಹಾವುಗಳು ಕಂಡುಬರುವುದಿಲ್ಲ. ಗರಗಸ ಹುರುಪೆಗಳ ಮಂಡಲ ಹಾವುಗಳು ಕಲ್ಲುಬಂಡೆಗಳ ಕೆಳಗೆ, ತೊಗಟೆಯ ಒಳಗೆ, ಮುಳ್ಳುಗಿಡಗಳಲ್ಲಿ ಮತ್ತು ಅವಿತುಕೊಳ್ಳ ಬಹುದಾದ ಇತರೆ ಒಣ ಜಾಗಗಳಲ್ಲಿ ವಿಶ್ರಾಂತಿ ಪಡೆಯುತ್ತಿರುತ್ತವೆ. ಈ ಪುಟ್ಟಹಾವಿನ ಸಂಚಾರದ ಆದ್ಯತೆಯ ಸ್ಥಳಗಳೆಂದರೆ ಜಂಬಿಟ್ಟಿಗೆ ಮಣ್ಣು, ಕಲ್ಲುಬಂಡೆಗಳು, ಗುಡ್ಡಗಳಿರುವ ಕುರುಚಲು ಕಾಡಿನ ಪ್ರದೇಶಗಳು ಹಾಗೂ ಶುಷ್ಕ ಬಯಲು ಪ್ರದೇಶಗಳು.

**ಸ್ವಭಾವ :** ಈ ಹಾವು ಪ್ರಧಾನವಾಗಿ ನಿಶಾಚರಿಯಾಗಿರುವುದರಿಂದ ಬೆಳಗಿನ ಹೊತ್ತು ಅಪರೂಪಕ್ಕೆ ಕಾಣುತ್ತದೆ. ಹಿಂದಿನ ರಾತ್ರಿ ಮಳೆಬಿದ್ದು ತಂಪಾಗಿದ್ದ ದಿನಗಳಲ್ಲಿ ಬಹುಶಃ ಬಿಸಿಲು ಕಾಯಿಸಲು ಬೆಳಗಿನ ಹೊತ್ತು ಈ ಹಾವು ಕಾಣಿಸಿಕೊಳ್ಳುವುದುಂಟು. ಇವು ಬೆಳಗಿನ ಹೊತ್ತು ಕಲ್ಲುಗುಂಡು, ಪೊದೆ ಅಥವಾ ಬಿಲಗಳಲ್ಲಿ ಅಡಗಿಕೊಂಡಿರುತ್ತವೆ. ಹೆಚ್ಚು ತೇವಾಂಶವಿರುವ ಅಥವಾ ಮಳೆ ಬಿದ್ದ ರಾತ್ರಿಗಳಲ್ಲಿ ಈ ಹಾವು ವಿಶೇಷ ಚಟುವಟಿಕೆಯಿಂದಿರುತ್ತದೆ. ಸಂಜೆಗತ್ತಲು ಪ್ರಾರಂಭಿಸಿದಾಗ ಬೆಚ್ಚಗಿರುವ ರಸ್ತೆಗಳು ಅಥವಾ ಕಾಲುಹಾದಿಗಳಲ್ಲಿ ಕೆಲವೊಮ್ಮೆ ಕಂಡುಬರುತ್ತದೆ. ಇದರ ಶರಿರದ ಎರಡೂ ಪಾರ್ಶ್ವಗಳ ಹುರುಪೆಗಳು ಗರಗಸದ ಹಲ್ಲುಗಳಂತಿರುವ ಏಣುಗಳನ್ನು ಹೊಂದಿವೆ. ಆದ್ದರಿಂದಲೇ ಈ ಹಾವಿಗೆ ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಗರಗಸ ಹುರುಪೆಯೆಂಬ ಹೆಸರು ಇರುವುದು. ಇತರೆ ಹಾವುಗಳು ಏದುಸಿರು ಬಿಡುವಾಗ ಬುಸುಗುಟ್ಟುವ ಶಬ್ದ ಉಂಟುಮಾಡುವಂತೆಯೇ ಈ ಹಾವುಗಳು ತಮ್ಮ ಪಾರ್ಶ್ವ ಹುರುಪೆಗಳ ಘರ್ಷಣೆಯಿಂದ 'ಶ್‌ಶ್' ಶಬ್ದ ಉಂಟುಮಾಡುತ್ತವೆ.

**ಸಂತಾನ :** ದಕ್ಷಿಣ ಭಾರತದ ಹೆಣ್ಣುಹಾವು ವರ್ಷದಲ್ಲಿ ಎರಡು ಬಾರಿ ಏಪ್ರಿಲ್ ಮತ್ತು ಆಗಸ್ಟ್ ತಿಂಗಳುಗಳ ನಡುವೆ 4 ರಿಂದ 8 ಮರಿಗಳನ್ನು ಹಾಕುತ್ತದೆ. ಉತ್ತರ ಭಾರತದಲ್ಲಿ ಪ್ರತಿ ವರ್ಷ ಪ್ರತಿ ಹೆಣ್ಣು ಹಾವು ಮರಿ ಹಾಕುವುದೇ ಎಂಬ ಬಗ್ಗೆ ತಿಳಿದಿಲ್ಲ.

**ಆಹಾರ :** ಇಲಿ, ಕಪ್ಪೆ, ಹಲ್ಲಿ, ಚೇಳು ಮತ್ತು ಇತರೆ ಸಂಧಿಪದಿಗಳು.

**ಪರಿಸ್ಥಿತಿ :** ಇವು ವಾಸಿಸುವ ಪ್ರದೇಶಗಳಲ್ಲಿ ಹೇರಳವಾಗಿವೆ. ಹಾಫ್‌ಕಿನ್ ಸಂಸ್ಥೆಯಲ್ಲಿ ಪ್ರತಿವಿಷ ಉತ್ಪಾದಿಸುವುದಕ್ಕಾಗಿ ಮಹಾರಾಷ್ಟ್ರದ ರತ್ನಗಿರಿಯಂತಹ ಕೆಲವು ಪ್ರದೇಶಗಳಿಂದ ಈ ಹಾವುಗಳನ್ನು ಅಪಾರ ಸಂಖ್ಯೆಯಲ್ಲಿ ಸಂಗ್ರಹಿಸಲಾಗುತ್ತಿದೆ.

**ವಿಷ :** ಈ ಹಾವುಗಳು ಎಲ್ಲೆಲ್ಲಿ ಹೆಚ್ಚು ಸಾಮಾನ್ಯವಾಗಿವೆಯೋ ಅಲ್ಲೆಲ್ಲಾ ಇವುಗಳ ಕಡಿತಗಳ ಸಂಖ್ಯೆಯೂ ಹೆಚ್ಚುತ್ತಿದೆ. ಅದೃಷ್ಟವಶಾತ್ ಬಹಳಷ್ಟು ಪ್ರದೇಶಗಳಲ್ಲಿ ಇವು ಪುಟಾಣಿ ಹಾವುಗಳಾದ್ದರಿಂದ, ಈ ಹಾವುಗಳ ಕಡಿತವು ಬಹುತೇಕ ಸಾವುಂಟುಮಾಡುವುದಿಲ್ಲ. ರತ್ನಗಿರಿ ಜಿಲ್ಲೆಯಲ್ಲಿರುವ ಒಬ್ಬ ವೈದ್ಯರು 10 ವರ್ಷಗಳ ಅವಧಿಯಲ್ಲಿ ಈ ಹಾವುಗಳ 300 ಕಡಿತಗಳಿಗೆ ಚಿಕಿತ್ಸೆ ನೀಡಿದ್ದಾರೆ. ಅವುಗಳಲ್ಲಿ ಕೇವಲ ಎರಡು ಸಾವುಗಳನ್ನುಂಟುಮಾಡಿತೆಂದು ವರದಿ ಮಾಡಿದ್ದಾರೆ. ಈ ಹಾವಿನ ವಿಷಕ್ಕೆ ರಕ್ತವನ್ನು ಹೆಪ್ಪುಗಟ್ಟಿಸುವ ಗುಣವಿದೆ. ಇದು ಶರೀರದಲ್ಲಿನ ಫೆಬ್ರಿನ್ (ಹೆಪ್ಪುಗಟ್ಟಿಸುವ ಘಟಕ) ಅಂಶವನ್ನು ನಿಷ್ಕ್ರಿಯಗೊಳಿಸಿ ತೀವ್ರವಾಗಿ ರಕ್ತ ಸೋರಲು ಕಾರಣವಾಗುತ್ತದೆ. ಒಂದು ವೇಳೆ ಹಾವು ಕಚ್ಚಿದಾಗ ಸಾಯುವಷ್ಟು ಪ್ರಮಾಣದ ವಿಷವೇರಿದ್ದರೆ ಕಚ್ಚಿಸಿಕೊಂಡ ವ್ಯಕ್ತಿಯು ಹಲವಾರು ದಿನಗಳ ನಂತರ ಸಾವನ್ನಪ್ಪುತ್ತಾನೆ. ಈ ವೇಳೆಯಲ್ಲಿ ಹಾವು ಕಚ್ಚಿದ್ದ ವ್ಯಕ್ತಿಗೆ ಪ್ರತಿವಿಷ ಚಿಕಿತ್ಸೆ, ರಕ್ತನೀಡುವುದು, ವಿಟಮಿನ್-ಕೆ ಮತ್ತು ಕ್ಯಾಲ್ಸಿಯಂ ಕಾರ್ಬೊನೇಟ್‌ಗಳನ್ನು ನೀಡುವುದರಿಂದ ಆತನನ್ನು ಬದುಕಿಸಿಕೊಳ್ಳಬಹುದು.

*ವಿಷಕಾರಿ*

# 30. ಬಿದಿರುಮೆಳೆ ಗುಳಿಮಂಡಲ ಹಾವು

*ಟ್ರೈಮಿರೆಸುರಸ್ ಗ್ರಾಮಿನಿಯಸ್ (Trimeresurus gramineus)*

**ವಿಶಿಷ್ಟ ಲಕ್ಷಣಗಳು :** ಚಿಕ್ಕದಾದ ಶರೀರ ; ಸುಮಾರಾಗಿ ಏಣುಗಳಿರುವ ಹುರುಪೆಗಳು; ಮೇಲ್ಭಾಗದಲ್ಲಿ ಹಸಿರು ಬಣ್ಣ ; ಅಗಲವಾದ ತ್ರಿಕೋಣಾಕಾರದ ತಲೆ ; ತೆಳುವಾದ ಕುತ್ತಿಗೆ.

**ಸರಾಸರಿ ಉದ್ದ :** 40 ಸೆಂ. ಮೀ. ; ಹುಟ್ಟಿದಾಗ : 16 ಸೆಂ. ಮೀ. ; ಗರಿಷ್ಠ : 80 ಸೆಂ. ಮೀ.

**ವಿವರಣೆ :** ಗುಳಿಮಂಡಲ ಹಾವು ಮಾಸಲು ಹಸಿರು ಬಣ್ಣದ ಶರೀರವನ್ನು ಹೊಂದಿದ್ದು ಬೆನ್ನ ಮೇಲೆ ಅಸಮವಾದ ಹಾಗೂ ಮಸುಕಾದ ಕಪ್ಪು ಬಣ್ಣದ ವಿನ್ಯಾಸವನ್ನು ಹೊಂದಿದೆ. ತೆಳುವಾದ ಹಾಗೂ ಕೋಮಲವಾದ ಕುತ್ತಿಗೆಯ ಮುಂಭಾಗದಲ್ಲಿ ಅಗಲವಾದ ತ್ರಿಕೋಣಾಕಾರದ ತಲೆಯಿದೆ. ತಲೆಯ ಮೇಲಿನ ಹುರುಪೆಗಳು ಚಿಕ್ಕದಾಗಿವೆ. ಬೆನ್ನಿನ ಹುರುಪೆಗಳು ಸ್ವಲ್ಪ ಮಟ್ಟಿಗೆ ಏಣುಗಳನ್ನು ಹೊಂದಿವೆ. ಭಾರತದಲ್ಲಿನ ಹಸಿರು ಗುಳಿಮಂಡಲಗಳಲ್ಲಿ ಬಿದಿರುಮೆಳೆ ಗುಳಿಮಂಡಲಗಳು ಅತ್ಯಂತ ಪರಿಚಿತ ಹಾವುಗಳು. ವಿಶೇಷವಾಗಿ ಹಸಿರು ಬಣ್ಣವಿರುವ ಈ ಗುಳಿಮಂಡಲಗಳು ಮುಖ್ಯವಾಗಿ ಬಳ್ಳಿ, ಪೊದೆ ಹಾಗೂ ಬಿದಿರುಮೆಳೆಗಳಲ್ಲಿ ವಾಸಿಸುವ ವೃಕ್ಷವಾಸಿಗಳು. ಆದರೆ ಶಿಲಾಗುಳಿಮಂಡಲ



ಬಿದಿರುಮೆಳೆ ಗುಳಿಮಂಡಲ ಹಾವು

ಗಳಂತಹ ಬಹುವರ್ಣಗಳ ಮಂಡಲಗಳು ಭೂವಾಸಿಗಳು. ಅವು ವೃಕ್ಷಗಳ ಬುಡಗಳು, ಕಡಿದಾದ ಬಂಡೆಗಳ ಪ್ರದೇಶ ಮತ್ತು ನದಿಗಳ ದಡಗಳಲ್ಲಿ ವಾಸಿಸಲು ಇಷ್ಟಪಡುತ್ತವೆ. ವಿವಿಧ ಗುಳಿಮಂಡಲಗಳ ಪ್ರಭೇದಗಳಿಗೆ ಭೂ ಎತ್ತರ, ಉಷ್ಣತೆ ಮತ್ತು ತೇವಾಂಶದ ಬಗ್ಗೆ ವಿಶೇಷ ಕಾಳಜಿ ಇರುವಂತೆ ಕಾಣುತ್ತದೆ.

**ವಿತರಣೆ :** ಪಶ್ಚಿಮ ಬಂಗಾಳದ ಕಲ್ಕತ್ತದಿಂದ ಗುಜರಾತಿನ ಬರೋಡದವರೆಗೆ ಒಂದು ರೇಖೆಯೆಳೆದರೆ ಅದರ ಕೆಳಗಿರುವ ಭಾರತದ ಬೆಟ್ಟಗುಡ್ಡಗಳಲ್ಲೆಲ್ಲ ಈ ಹಾವುಗಳು ಕಂಡುಬರುತ್ತವೆ. ಗೋವಾದಿಂದ ದಕ್ಷಿಣಕ್ಕಿರುವ ಪಶ್ಚಿಮಘಟ್ಟಗಳಲ್ಲಿ ಈ ಹಾವು ದೊರೆಯುವುದಿಲ್ಲ. ಅತ್ಯಂತ ಎತ್ತರ ಪ್ರದೇಶಗಳಲ್ಲಿ ಬದುಕಿರುವ ಹಾವುಗಳಲ್ಲಿ ಹಿಮಾಲಯದ ಗುಳಿಮಂಡಲವು ಬಹುಶಃ ವಿಶ್ವದಾಖಲೆ ನಿರ್ಮಿಸಿದೆ. ಅದು ಹಿಮಾಲಯ ಪರ್ವತಗಳಲ್ಲಿ 4800 ಮೀಟರುಗಳಷ್ಟು ಎತ್ತರದ ಪ್ರದೇಶಗಳಲ್ಲಿಯೂ ವಾಸಿಸುತ್ತದೆ. ಗುಳಿಮಂಡಲಗಳ 5 ಪ್ರಭೇದಗಳು ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ, 5 ಪ್ರಭೇದಗಳು ಪಶ್ಚಿಮ ಘಟ್ಟಗಳಲ್ಲಿ ಮತ್ತು 8 ಪ್ರಭೇದಗಳು ಪೂರ್ವ ಹಿಮಾಲಯದಿಂದ ಅಸ್ಸಾಂವರೆಗೆ ವಾಸಿಸುತ್ತಿವೆ.

**ಆವಾಸ :** ನದೀ ಮುಖಜ ಭೂಮಿಗಳಲ್ಲಿರುವ ದಟ್ಟ ಹಸಿರಿನ ತಂಪು ಪ್ರದೇಶಗಳು, ಬಿದಿರು ಮತ್ತು ಇತರೆ ದಟ್ಟ ಅರಣ್ಯದ ಪ್ರದೇಶಗಳು.

**ಸ್ವಭಾವ :** ಬಿದಿರುಮೆಳೆ ಗುಳಿಮಂಡಲಗಳು ಮಂದಗಾಮಿ ಹಾವುಗಳು. ಇವು ರಾತ್ರಿ ವೇಳೆ ಚಟುವಟಿಕೆಯಿಂದಿದ್ದು ಹಗಲಿನ ವೇಳೆ ತೆರೆದ ಪ್ರದೇಶದಲ್ಲಿ ನಿದ್ರಿಸುತ್ತವೆ. ಇವುಗಳ ಕಪಟರೂಪವೇ ಇವಕ್ಕೆ ರಕ್ಷಣೆ. ವಿರಮಿಸಿಕೊಳ್ಳುವಾಗ ಬಹುತೇಕ ತಮ್ಮ ಬಾಲದಿಂದ ಮತ್ತೊಂದು ಕೊಂಬೆಗೆ ಸುತ್ತಿಕೊಂಡಿರುತ್ತವೆ ಮತ್ತು ಇವು ಹಸಿರೆಲೆಗಳನ್ನು ಹೋಲುವುದರಿಂದ ಗುರುತಿಸುವುದು ಕಷ್ಟ. ಇವು ತಮ್ಮನ್ನು ರಕ್ಷಣೆ ಮಾಡಿಕೊಳ್ಳುವುದರಲ್ಲಿ, ನಿಧಾನವಾದರೂ ತುಂಬ ಪೆಟ್ಟಾದಾಗ ಅಥವಾ ಹೆಚ್ಚು ಕೆಣಕಿದಾಗ ಶೀಘ್ರವಾಗಿ ಮೇಲೆರಗಿ ಕಚ್ಚುತ್ತವೆ. ಇವು ಹೆದರಿದಾಗ ಅಥವಾ ತೊಂದರೆಗೆ ಸಿಲುಕಿಕೊಂಡಾಗ ತಮ್ಮ ಬಾಲವನ್ನು ಕಂಪಿಸಬಹುದು.

**ಸಂತಾನ :** ಹೆಣ್ಣು ಹಾವು 4 ಅಥವಾ 5 ಮರಿಗಳಿಗೆ ಜನ್ಮ ನೀಡುತ್ತದೆ. ಮರಿಗಳಿಗೆ ಹೊಳೆಯುವ ಬಣ್ಣಗಳ ಬಾಲವಿರುತ್ತದೆ. ಮರಿಗಳು ಈ ಬಾಲವನ್ನು ಹುಳದ ರೀತಿ ಅಲ್ಲಾಡಿಸುತ್ತ ಸಣ್ಣ ಕಪ್ಪೆ ಮತ್ತು ಹಲ್ಲಿಗಳನ್ನು ಆಕರ್ಷಿಸಿ ಬಲಿ ತೆಗೆದುಕೊಳ್ಳುತ್ತವೆ. ಗಮನಾರ್ಹವಾದ ಈ ಸ್ವಭಾವವು ಅಮೆರಿಕಾಗಳಲ್ಲಿನ ಗುಳಿಮಂಡಲಗಳಲ್ಲಿಯೂ ಇದೆ.

**ಆಹಾರ :** ಬಿದಿರುಮೆಳೆ ಗುಳಿಮಂಡಲಗಳ ಮರಿಗಳು ಕಪ್ಪೆ ಮತ್ತು ಹಲ್ಲಿಗಳನ್ನು ತಿನ್ನುತ್ತವೆ. ದೊಡ್ಡ ಹಾವುಗಳು ದಂಶಕಗಳನ್ನು ಇಷ್ಟಪಡುತ್ತವಾದರೂ ಕಪ್ಪೆಗಳನ್ನು ಸಹ ತಿನ್ನುತ್ತವೆ.

**ಪರಿಸ್ಥಿತಿ :** ಭಾರತದ ಎಲ್ಲ ಗುಳಿಮಂಡಲಗಳೂ ಅರಣ್ಯ ಜೀವಿಗಳು. ದಟ್ಟವಾದ ಅರಣ್ಯ ಪ್ರದೇಶಗಳ, ಅದರಲ್ಲಿಯೂ ಮುಖ್ಯವಾಗಿ ನಿತ್ಯಹರಿದ್ವರ್ಣದ ಅರಣ್ಯಗಳ ನಾಶದಿಂದಾಗಿ ಈ ಹಾವುಗಳ ಹಲವಾರು ಪ್ರಭೇದಗಳ ಸಂದಣಿ ಕಡಿಮೆಯಾಗುತ್ತಿದೆ.

**ವಿಷ :** ಅದೃಷ್ಟವಶಾತ್, ಗುಳಿಮಂಡಲಗಳು ಚಿಕ್ಕವು. ಆದ್ದರಿಂದ ಅವುಗಳ ಕಡಿತ ಅಪರೂಪಕ್ಕೆ ಅಪಾಯ ಉಂಟುಮಾಡುತ್ತದೆ. ಕೆಲವು ತೋಟಗಾರಿಕೆ ಪ್ರದೇಶಗಳಲ್ಲಿ ಈ ಹಾವಿನ ಕಡಿತಗಳು ಸಾಮಾನ್ಯ. ಇವುಗಳಿಂದ ಕಡಿಸಿಕೊಂಡ ವ್ಯಕ್ತಿ ಸಾಧಾರಣವಾಗಿ ಒಂದೆರಡು ದಿನ ಅಶಕ್ತನಾಗಿರುತ್ತಾನೆ ಅಷ್ಟೆ.

# ಹಾವುಗಳ ಸಾಮಾನ್ಯ ಸಂಗತಿಗಳು

ಭಾರತದಲ್ಲಿ ಮಾತ್ತಾವುದೇ ವಿಷಯಕ್ಕಿಂತ ಹೆಚ್ಚಿಗೆ ಹಾವುಗಳ ಬಗ್ಗೆ ಕಲ್ಪಿಸಿಕೊಂಡ ಕಲ್ಪಿತ ಕಟ್ಟುಕತೆಗಳೇ ಹೆಚ್ಚು. ಹಾಗೂ ನಿಜ ಸಂಗತಿಗಳು ತಿಳಿದಿರುವುದು ಕಡಿಮೆ. ಪುರಾಣಗಳಲ್ಲಿನ ಹಾವುಗಳ ದುಷ್ಪ ಪ್ರಭಾವಗಳ ಬಗ್ಗೆ ; ಹಾವಿನ ಕಡಿತದಿಂದ ಗುಣವಾದ ಆಶ್ಚರ್ಯಕರ ಘಟನೆಗಳ ಬಗ್ಗೆ ಹಾಗೂ ಅಸಂಬದ್ಧ ಕಲ್ಪನೆಗಳ ಅನೇಕ ಕಥೆಗಳಿವೆ. ಶರೀರದ ಎರಡೂ ಕಡೆ ತಲೆಯಿರುವ ಹಾವುಗಳಿವೆಯೆಂದು ; ಅವು ಆರು ತಿಂಗಳು ಒಂದು ದಿಕ್ಕಿನಲ್ಲಿ ಹಾಗೂ ಮಿಕ್ಕ ಆರು ತಿಂಗಳು ಇನ್ನೊಂದು ದಿಕ್ಕಿನಲ್ಲಿ ಚಲಿಸುತ್ತವೆಂದು ಅಥವಾ ಪ್ರತಿ ಶುಕ್ರವಾರ ಪೂಜೆಯ ವೇಳೆಯಲ್ಲಿ ನಾಗರಹಾವುಗಳು ಹಾಲನ್ನು ಸ್ವೀಕರಿಸಲು ಬರುತ್ತವೆಂದು ಜನ ನಂಬುತ್ತಾರೆ. ಈ ನಂಬಿಕೆಗಳು ಕುತೂಹಲಕಾರಿ ಹಾಗೂ ವರ್ಣರಂಜಿತವಾಗಿವೆ. ಆದರೆ ಹಾವುಗಳ ಬಗ್ಗೆ ವಾಸ್ತವ ಸಂಗತಿಗಳು ಈ ಕಲ್ಪಿತ ಕಥೆಗಳಿಗಿಂತಲೂ ವಿಸ್ಮಯಕಾರಿ! ಉದಾಹರಣೆಗೆ, ಹೆಬ್ಬಾವುಗಳು ತಮಗೆ ಪ್ರತಿನಿತ್ಯ



ಚೆನ್ನೈನ ಸರ್ಪವನದಲ್ಲಿ ನಾಗರಹಾವಿನಿಂದ ವಿಷ ಪಡೆಯುತ್ತಿರುವುದು

ಅಗತ್ಯವಿರುವ ಶಕ್ತಿಯ ಪ್ರಮಾಣದ 400 ಪಟ್ಟು ಹೆಚ್ಚು ಆಹಾರವನ್ನು ಒಮ್ಮೆಲೇ ಉಣ್ಣುತ್ತವೆಂಬುದು ಅಥವಾ ಹಾವುಗಳ ವಿಷವನ್ನು ಜೀವ ರಕ್ಷಿಸುವ ಔಷಧಗಳನ್ನು ತಯಾರಿಸಲು ಬಳಸುತ್ತಾರೆಂಬುದು ನಿಮಗೆ ಗೊತ್ತೇ ?

ಬಹುತೇಕ ಹಾವುಗಳು ನಿರುಪದ್ರವಿಗಳು. ಅವನ್ನು ಸುರಕ್ಷಿತವಾಗಿ ಕೈಯಲ್ಲಿ ಹಿಡಿಯಬಹುದು. ಆದರೆ ಕೆಲವು ಪ್ರಭೇದಗಳು ಸಾವುಂಟುಮಾಡುವಷ್ಟು ವಿಷಕಾರಿಗಳು. ಎಲ್ಲಾ ಹಾವುಗಳು ಕಚ್ಚುವ ಮೂಲಕ ಸ್ವಯಂರಕ್ಷಣೆ ಮಾಡಿಕೊಳ್ಳುತ್ತವೆ. ನುಣುಪಾದ ಹೊಳಪಿನ ಶುಷ್ಕ ಚರ್ಮ ಹಾವುಗಳಿಗಿದ್ದು, ಇದು ಶೀಘ್ರ ಚಲನೆಗೆ ಸಹಾಯ ಮಾಡುತ್ತದೆ. ಆದ್ದರಿಂದ ಹಾವುಗಳಿಗೆ ಕಾಲುಗಳಿಲ್ಲದಿರುವುದು ಸಮಸ್ಯೆಯೇನಲ್ಲ. ಕೆಲವು ಹಾವುಗಳು ಬೆಳಗಿನ ಹೊತ್ತು ಮಾತ್ರ ಸುತ್ತಾಡುತ್ತಿರುತ್ತವೆ (ದಿನಚರಿಗಳು) ಮತ್ತೆ ಕೆಲವು ರಾತ್ರಿಯ ವೇಳೆ ಮಾತ್ರ ಸುತ್ತಾಡುತ್ತವೆ(ನಿಶಾಚರಿಗಳು). ಮಳೆ ಬಿದ್ದಾಗ ಎಲ್ಲ ಹಾವುಗಳೂ ಹೆಚ್ಚು ಚಟುವಟಿಕೆಯಿಂದಿರುತ್ತವೆ.

### ಇಂದ್ರಿಯುಗಳು :

ಹಾವುಗಳಿಗೆ ಕಿವಿಯ ತಮಟೆ ಮತ್ತು ಕಿವಿಯ ರಂಧ್ರಗಳು ಇಲ್ಲದಿರುವುದರಿಂದ ಅವು ಕಿವುಡು ಜೀವಿಗಳೇ ಆಗಿರಬೇಕೆಂದು ಅನೇಕ ಲೇಖಕರು ವರದಿ ಮಾಡಿದ್ದಾರೆ. ಗಾಳಿಯ ಮೂಲಕ ಬರುವ ಶಬ್ದಗಳಿಗೆ ಹಾವುಗಳು ಪ್ರತಿಸ್ಪಂದಿಸುವುದಿಲ್ಲವೆಂಬುದು ಸತ್ಯಸಂಗತಿ (ಆದರೆ ಹಾವುಗಳ ಹೃದಯ ಬಡಿತ ಹೆಚ್ಚಾಗಬಹುದೆಂದು ಪ್ರಯೋಗಗಳು ತೋರಿಸಿವೆ). ಆದರೆ ಅವು ತಾವಿರುವ ನೆಲದ ಮೂಲಕ ಬರುವ ಕಂಪನಗಳಿಗೆ ಸ್ಪಂದಿಸುತ್ತವೆ. ಗಾಳಿಯಲ್ಲಿ ತೇಲಿಬರುವ ಕಂಪನಗಳನ್ನು ಕೆಲವೊಮ್ಮೆ ಹಾವುಗಳು ಶ್ವಾಸಕೋಶಗಳ ಮೂಲಕ ಗ್ರಹಿಸುತ್ತವೆಂದು ಅಮೆರಿಕಾದಲ್ಲಿ (ಪೀಟರ್ ಹಾರ್ಟ್ಲೈನ್, 1971) ನಡೆಸಿದ ಇತ್ತೀಚಿನ ಪ್ರಯೋಗಗಳು ದೃಢಪಡಿಸಿವೆ.

ಹಾವುಗಳು ಚಲಿಸದ ವಸ್ತುಗಳಿಂದ ಅಪಾಯವಿದೆಯೆಂದು ಗ್ರಹಿಸುವುದಿಲ್ಲವಾದ್ದರಿಂದ ಹಾವುಗಳಿಗೇ ವಿಶಿಷ್ಟವಾದ ದೃಷ್ಟಿ ವ್ಯವಸ್ಥೆಯಿರಬಹುದೆನ್ನುತ್ತಾರೆ. ಮರದಿಂದ ಸಾಗಿ ಬಂದ ಹಾವು ಮರದ ಭಾಗವೆಂದೇ ತಿಳಿದು, ನನ್ನ ಶರೀರದ ಮೇಲೂ ಸರಾಗವಾಗಿ ಸಾಗಿ ಹೋದದ್ದು ನೋಡಿದ್ದೇನೆ. ಮಂಡಲ ಹಾಗೂ ಹೆಬ್ಬಾವುಗಳಂತಹ ಆಲಸಿಗಳು ಮತ್ತು ದಪ್ಪ ಶರೀರವಿರುವ ಹಾವುಗಳಿಗೆ ಹೋಲಿಸಿದರೆ ಕೇರೆಹಾವು ಹಾಗೂ ಮರದ ಹಾವುಗಳಂತಹ ತೆಳುವಾದ ಮತ್ತು ಹೆಚ್ಚು ಚಟುವಟಿಕೆಯ ಸರ್ಪಗಳಿಗೆ ಒಳ್ಳೆಯ ದೃಷ್ಟಿಯಿರುವಂತಿದೆ.

ಅನೇಕ ಹಾವುಗಳಿಗೆ ವಾಸನೇಂದ್ರಿಯವೇ ಅತ್ಯಂತ ಮುಖ್ಯವಾದ ಇಂದ್ರಿಯ. ನೆಲ ಮತ್ತು ಗಾಳಿಯಲ್ಲಿನ ವಾಸನೆಯನ್ನು ಗ್ರಹಿಸಲು ಹಾವುಗಳು ಬಹುತೇಕವಾಗಿ ತಮ್ಮ ನಾಲಗೆಯನ್ನು ಅವಲಂಬಿಸಿವೆ. ಬಳಿಕ ವಾಸನೆಯನ್ನೂ ಬಾಯಂಗಳದ ಮೇಲ್ಭಾಗದಲ್ಲಿನ ಜಾಕಬ್‌ಸನ್ ಅಂಗಕ್ಕೆ ವರ್ಗಾಯಿಸುತ್ತವೆ. ಈ ಕಾರಣಕ್ಕಾಗಿಯೇ ಹಾವು ತನ್ನ ನಾಲಗೆಯನ್ನು ಆಗಾಗ್ಗೆ ಹೊರಚಾಚುತ್ತಿರುತ್ತದೆ. ಹೀಗೆ ಹಾವುಗಳು ತಮ್ಮ ಈಡು



ಭಾರತದ (ಒಂಟಿ ಪೆಡೆ ಗುರುತಿನ) ನಾಗರ ಹಾವು



ನಾಗರ ಹಾವಿನ ಮೊಟ್ಟೆಗಳಿಂದ ಹೊರಬರುತ್ತಿರುವ ಮರಿಗಳು



ನಾಗರ ಹಾವು (ಕೋಬ್ರ)



ಭಾರತದ ನಾಗರ ಹಾವು (ಕನ್ನಡಕದ ಹೆಡೆ ಗುರುತಿನ)



ಸಾಮಾನ್ಯ ಅಲಂಕೃತ ಸರ್ಪ


ಮೇಲ್ ನೇತ್ರಕ
ನೇತ್ರೋತ್ತರ ಕಣಗಳು
ಕಪೋಲಕಗಳು
ಮುನ್ನೇತ್ರಕಗಳು
ಅಂತರ ನಾಸಿಕ
ಮುನ್‌ನಾಸಿಕ
ಮುಸುಡಿ ಫಲಕ
ಹಿಂನಾಸಿಕ
ಲೋರಿಯಲ್
ಕೆಳ ತುಟಿಯ ಫಲಕಗಳು
ಮೇಲ್ತುಟಿಯ ಫಲಕಗಳು


ಮುಸುಡಿ ಫಲಕ
ಅಂತರನಾಸಿಕ
ಮುನ್‌ಫಲಕ
ಮೇಲ್ ನೇತ್ರಕ
ಮುಂಫಲಕ
ಹಿಂಫಲಕ


ಮುಸುಡಿ ಫಲಕ
ಮೆಂಟಲ್
ಗಲ್ಲ ಫಲಕಗಳು
ಉದರದ ಫಲಕಗಳು



ಮುಂದೆ ಗುಳಿಗಳಿರುವ ಏಣುಗಳ ಹುರುಪೆಗಳು




ಮೇಲ್ಭಾಗದ ಹುರುಪೆಗಳ ಸಾಲುಗಳನ್ನು ಎಣಿಸುವ ವಿಧಾನ




ಗುದ ಫಲಕ (ಒಂದೇ)




ವಿಭಜನೆಯಾದ ಗುದಫಲಕ

ಹುರುಪೆಗಳು(ನಾಮಪದ್ಧತಿ)



1. ಗಾಳಿಯಿಂದ ರಾಸಾಯನಿಕ ಕಣಗಳನ್ನು ತೆಗೆದುಕೊಳ್ಳಲು ನಾಲಗೆಯನ್ನು ಹೊರಚಾಚಿದೆ




2. ನಾಲಗೆಯನ್ನು ಹಿಂತೆಗೆದುಕೊಂಡು ಜಾಕಬ್‌ಸನ್ ಅಂಗದ ಕೆಳಗೆ ರುಚಿ – ವಾಸನೆಯ ವಿಶ್ಲೇಷಣೆಗಾಗಿ ಇಡಲಾಗಿದೆ.

ಜೀವಿಗಳ ಜಾಡನ್ನು ಹಿಡಿಯಲು, ಸೂಕ್ತ ಸಂಗಾತಿಯ ನೆಲೆ ತಿಳಿದುಕೊಳ್ಳಲು ಹಾಗೂ ಮುಂಗುಸಿ ಮತ್ತು ಮನುಷ್ಯನಂತಹ ಜೀವಿಗಳಿಂದ ತಪ್ಪಿಸಿಕೊಳ್ಳಲು ಅವುಗಳ ವಾಸನೆ ಹಿಡಿಯುತ್ತವೆ.

ಹಾವುಗಳು ಉಷ್ಣತೆ ಹಾಗೂ ತೇವಾಂಶದ ಬದಲಾವಣೆಗಳಿಂದ ಹಾನಿಗೆ ಒಳಗಾಗಬಹುದು. ಎಲ್ಲ ಶೀತರಕ್ತ ಪ್ರಾಣಿಗಳಂತೆ (ವಾಸ್ತವವಾಗಿ ಬಾಹ್ಯ ಉಷ್ಣ ಜೀವಿಗಳು) ಹಾವುಗಳು ಸಹ ಅತ್ಯಂತ ಹಿತಕರವಾದ ಉಷ್ಣತೆಯನ್ನು ಅರಸುತ್ತಿರುತ್ತವೆ. ಶರೀರದ ಉಷ್ಣತೆಯು ಹಿತಕರವಾದ ವ್ಯಾಪ್ತಿಯಲ್ಲಿದ್ದಾಗ ಮಾತ್ರ ಹಾವುಗಳು ತಿನ್ನುತ್ತವೆ, ಗಂಡು – ಹೆಣ್ಣುಗಳು ಕೂಡುತ್ತವೆ, ಸಂತಾನೋತ್ಪತ್ತಿ ಮಾಡುತ್ತವೆ. ತುಂಬ ಚಳಿಯಿದ್ದಾಗ ಹಾವಿನ ಜೈವಿಕ ಚಟುವಟಿಕೆಗಳು ಕಡಿಮೆಯಾಗಿ ಈಡುಜೀವಿಯನ್ನು ಹಿಂಬಾಲಿಸಿ ಹಿಡಿಯುವಲ್ಲಿ ಅಥವಾ ಶತ್ರುಗಳಿಂದ ತಪ್ಪಿಸಿಕೊಳ್ಳುವಲ್ಲಿಯೂ ಹಾವು ಆಲಸಿಯಾಗುತ್ತದೆ. ತುಂಬ ಹೆಚ್ಚಿನ ಉಷ್ಣತೆಯಿದ್ದಾಗ ಹಾವು ನಿಶ್ಚೇಷ್ಟಿತವಾಗುತ್ತದೆ. ಶರೀರದ ನೀರಿನಂಶ ಕಳೆದುಕೊಂಡು ಸಾಯುತ್ತದೆ.

**ಆಹಾರ ಗಳಿಕೆ :**

ಹಾವು ತನ್ನ ಶರೀರದಲ್ಲಿ ಕೊಬ್ಬನ್ನು ಶೇಖರಿಸಿಕೊಳ್ಳುತ್ತದೆ. ಕೆಲವು ಹಾವುಗಳು ಆಹಾರ ತಿನ್ನದೆಯೇ ಹಲವಾರು ತಿಂಗಳುಗಳು ಇರಬಲ್ಲವು. ಆದರೂ ಸಹ, ಸಾಮಾನ್ಯವಾಗಿ



ಇತರೆ ಅನೇಕ ಹಾವುಗಳಿಗಿಂತ ಹೆಬ್ಬಾವು ಅತಿ ದೊಡ್ಡ ದಂಶಕ ಭಕ್ಷಕ.
ಇಲ್ಲಿ ಮರಿ ಹೆಬ್ಬಾವೊಂದು ಹೆಗ್ಗಣವನ್ನು ನುಂಗುತ್ತಿದೆ.



ಕಾಳಿಂಗ ಸರ್ಪ ಹಾವುಗಳನ್ನು ತಿನ್ನುತ್ತಿದೆ.
ಇಲ್ಲಿ ನಿರುಪದ್ರವಿ ಕೇರೆ ಹಾವನ್ನು ಕಾಳಿಂಗ ಇನ್ನೇನು ನುಂಗಲಿದೆ.

ಹಾವುಗಳು ಹಲವು ದಿನಗಳಿಗೊಮ್ಮೆ ಉಣ್ಣುತ್ತವೆ. ನೆಲದ ಮೇಲೆ ವಾಸಿಸುವ ಬಹುತೇಕ ದೊಡ್ಡ ಹಾವುಗಳು ಇಲಿ ಮತ್ತು ಕಪ್ಪೆಗಳನ್ನು, ನೀರುಹಾವುಗಳು, ಮೀನು ಮತ್ತು ಹಾವುಮೀನುಗಳನ್ನು ತಿನ್ನುತ್ತವೆ. ಇದಕ್ಕೆ ಅಪವಾದವೆನ್ನುವಂತೆ ಕಡಂಬಳಗಳು ಹಾಗೂ ಕಾಳಿಂಗ ಸರ್ಪಗಳು ಪ್ರಧಾನವಾಗಿ ಹಾವುಗಳನ್ನೇ ತಿನ್ನುತ್ತವೆ. ಅವು ಚಿಕ್ಕ ಹಾವುಗಳು ಹಾಗೂ ಕೆಲವು ದೊಡ್ಡ ಹಾವುಗಳ ಮರಿಗಳನ್ನೂ, ಹಲ್ಲಿ, ಕೀಟಗಳು ಮತ್ತು ಅವುಗಳ ಲಾರ್ವಗಳನ್ನೂ, ಚೇಳು ಮತ್ತು ಎರೆಹುಳಗಳನ್ನು ತಿನ್ನುತ್ತವೆ. ಪ್ರತಿಯೊಂದು ಪ್ರಭೇದದ ಹಾವು ಹಲ್ಲಿ, ಚೇಳು, ಕೀಟ ಅಥವಾ ಹುಳಗಳಲ್ಲಿ ಯಾವುದನ್ನು ಇಷ್ಟಪಡುತ್ತದೆಂಬ ಬಗ್ಗೆ ನಮಗೆ ತಿಳಿದಿರುವುದು ತುಂಬ ಕಡಿಮೆ.

ವಿವಿಧ ಪ್ರಭೇದಗಳ ಹಾವುಗಳ ಆಹಾರ ಗಳಿಕೆಯ ವಿಧಾನಗಳಲ್ಲಿ ವ್ಯತ್ಯಾಸಗಳಿವೆ. ನಾಗರ ಮತ್ತು ಮಂಡಲ ಹಾವುಗಳಂತಹ ವಿಷಸರ್ಪಗಳ ವಿಷ ಚುಚ್ಚುವ ವಿಶೇಷಾಂಗಗಳು ಈಡುಜೀವಿಯನ್ನು ಹಿಡಿಯಲು ಮತ್ತು ಸಾಯಿಸಲು ಸಹಾಯಕಾರಿ. ಕೇರೆಹಾವು, ನೀರುಹಾವು ಹಾಗೂ ಪಟ್ಟೆ ಬೆನ್ನೇಣು ಹಾವುಗಳಂತಹ ನಿರುಪದ್ರವಿ ಸರ್ಪಗಳು ಈಡುಜೀವಿಯನ್ನು ಬೇಟೆಯಾಡಿ ಜೀವಂತವಾಗಿರುವ ಈಡುಜೀವಿಯನ್ನು ಸುಲಭವಾಗಿ ನುಂಗುತ್ತವೆ. ಆದರೂ ಅನೇಕ ನಿರುಪದ್ರವಿಯೆನಿಸುವ ಹಾವುಗಳು ತಾವು ತಿನ್ನುವ ಕೀಟ, ಮೀನು, ಕಪ್ಪೆ ಮತ್ತು ಹಲ್ಲಿಗಳನ್ನು ನಿಶ್ಚೇಷ್ಟಿತಗೊಳಿಸುವಷ್ಟು ವಿಷವನ್ನು ಹೊಂದಿವೆ. ಹೆಬ್ಬಾವು, ಮರಳ ಹೆಬ್ಬಾವು ಹಾಗೂ ರೇಸರ್ (ಶೀಘ್ರಗಾಮಿ) ಹಾವುಗಳಂತಹ ಕೆಲವು ವಿಷಕಾರಿಯಲ್ಲದ ಹಾವುಗಳು, ಹೊಂಚುಹಾಕಿ, ಮೇಲೆರಗಿ ತಮ್ಮ ಈಡುಜೀವಿಯನ್ನು ಹಿಡಿಯುತ್ತವೆ ಮತ್ತು ಶರೀರದಿಂದ ಬಳಸಿ ಅದನ್ನು ಸಾಯುವವರೆಗೆ ಹಿಸುಕುತ್ತವೆ. ಸೆರೆಯಲ್ಲಿರುವ ಹಾವುಗಳು ಕೆಲವೊಮ್ಮೆ ಸತ್ತ ಪ್ರಾಣಿಯನ್ನು ತಿನ್ನಲು ನಿರಾಕರಿಸುತ್ತವೆ. ಆಹಾರ ಗಳಿಸಲು ಶಾಖ, ತೇವಾಂಶ ಮತ್ತು ಬೆಳಕು ಅಗತ್ಯವಾದಂತೆಯೇ ಈಡುಜೀವಿಯನ್ನು ಬೆನ್ನಟ್ಟಿ ಹೋಗುವ ಹಾಗೂ ಹಿಡಿಯುವ ಕ್ರಿಯೆಯೂ ಬಹುಶಃ ಒಂದು ಪ್ರಧಾನ ಅಂಶವಾಗಿರಬಹುದು. ಇದಕ್ಕೆ ತದ್ವಿರುದ್ಧವಾಗಿ ಹಾವುಗಳು ಕೆಲವೊಮ್ಮೆ ಹೆಣವನ್ನು ತಿನ್ನುವುದನ್ನು ಗಮನಿಸಲಾಗಿದೆ. ಬಹಳ ದಿನಗಳ ಹಿಂದೆಯೇ ಸತ್ತು ಕೊಳೆಯುತ್ತಿರುವ ಕಳೇಬರಗಳನ್ನು ಹಾಗೂ ರಸ್ತೆ ಬದಿಯಲ್ಲಿ ಸತ್ತ ಪ್ರಾಣಿಗಳ ಚೂರುಗಳನ್ನು ಸಹ ಹಾವುಗಳು ತಿನ್ನಬಹುದು.

ಹಾವುಗಳು ತಮ್ಮ ಈಡುಜೀವಿಗಳನ್ನು ನುಂಗಬೇಕು. ಹಾವೊಂದು ತನ್ನ ತಲೆಯ ವ್ಯಾಸಕ್ಕಿಂತ ಎರಡು ಅಥವಾ ಮೂರು ಪಟ್ಟು ಹೆಚ್ಚು ದಪ್ಪವಿರುವ ಕಪ್ಪೆಯನ್ನು ಹಿಡಿದು ಕೆಲವೇ ನಿಮಿಷಗಳಲ್ಲಿ ನುಂಗುವ ದೃಶ್ಯ ಅತ್ಯಂತ ವಿಸ್ಮಯಕಾರಿ. ಹಾವಿನ ಹಲ್ಲುಗಳು ಸಾಲಾಗಿರುತ್ತವೆ ಮತ್ತು ಒಳ ಬಾಗಿರುತ್ತವೆ. ಹೊಲಿಗೆಯಂತ್ರದಲ್ಲಿ ಬಟ್ಟೆ ಮುಂದಕ್ಕೆ ದೂಡುವ ಹಲ್ಲುಗಳಂತೆಯೇ ಹಾವುಗಳ ಹಲ್ಲುಗಳು ಈಡುಜೀವಿಯನ್ನು ಗಂಟಲಿಂದ ಕೆಳಗಿಳಿಯುವಂತೆ ಮಾಡುತ್ತವೆ. ಹಾವಿನ ದವಡೆಗಳು, ಚರ್ಮ ಮತ್ತು ಗಂಟಲು ಹಿಗ್ಗಬಲ್ಲವು. ಆದರೂ ಹೆಬ್ಬಾವುಗಳು ಚಿರತೆ ಅಥವಾ ದೊಡ್ಡ ಜಿಂಕೆಗಳನ್ನು ನುಂಗಿದ ಅಥವಾ ನಾಗರಹಾವುಗಳು ದೊಡ್ಡ ಹೆಗ್ಗಣಗಳನ್ನು ನುಂಗಿದ ವರದಿಗಳು ಸಾಮಾನ್ಯವಾಗಿ ಉತ್ಪ್ರೇಕ್ಷಿತ ಸಂಗತಿಗಳು.

## ಹುಟ್ಟು ಮತ್ತು ಬೆಳವಣಿಗೆ :

ಬಹುತೇಕ ಹಾವುಗಳು ವರ್ಷಕ್ಕೊಮ್ಮೆ ಕೂಡುತ್ತವೆ. ಪ್ರತಿ ಪ್ರಭೇದಕ್ಕೂ ತನ್ನದೇ ಆದ ಬೆದೆಯ ಕಾಲವಿದೆ. ದಕ್ಷಿಣ ಭಾರತದ ಹೆಚ್ಚಿನ ಪ್ರಭೇದಗಳಿಗೆ ವರ್ಷಕ್ಕೆ ಎರಡು ಬೆದೆ ಕಾಲಗಳಿರುವಂತೆ ಕಾಣುತ್ತದೆ.

ಹಾವುಗಳಲ್ಲಿ ಲಿಂಗಪದ್ಧತಿಯ ಸಂತಾನವಿದೆ. ಗಂಡು ಹಾವಿನ ಬಾಲದಲ್ಲಿ ಹೊರಚಾಚಬಲ್ಲ ಒಂದು ಜೊತೆ ಶಿಶ್ನಗಳಿವೆ(ಅರೆಶಿಶ್ನ). ಗಂಡು-ಹೆಣ್ಣು ಹಾವುಗಳು ವಾಸನೆಯಿಂದ ಒಂದನ್ನೊಂದು ಗುರುತಿಸಿಕೊಳ್ಳುತ್ತವೆ. ಇದಕ್ಕಾಗಿ ಬಾಲದ ಬುಡದಲ್ಲಿರುವ ಗುದದ್ವಾರದ ಹತ್ತಿರ ಗಂಡು ಹೆಣ್ಣುಗಳೆರಡರಲ್ಲೂ ವಾಸನಾ ಗ್ರಂಥಿಗಳಿವೆ. ಹೆಣ್ಣು ಹಾವಿನಲ್ಲಿ ವಾಸನಾ ಗ್ರಂಥಿ ಸ್ವಲ್ಪ ದೊಡ್ಡದು. ಪ್ರತಿಯೊಂದು ಪ್ರಭೇದಕ್ಕೂ ವಿಶಿಷ್ಟವಾದ ವಾಸನೆಯಿರುತ್ತದೆ. ಕೆಲವು ಹಾವುಗಳಿಗೆ ಕೆಟ್ಟವಾಸನೆಯಿದ್ದರೆ, ಹಲವಕ್ಕೆ ಆಹ್ಲಾದಕರವಾದ ವಾಸನೆಯಿರುತ್ತದೆ. ಸಂತಾನಾಭಿವೃದ್ಧಿಯ ಕಾಲದಲ್ಲಿ ಪ್ರತಿಯೊಂದು ಹಾವು ತನಗೇ ವಿಶಿಷ್ಟವಾದ ವಾಸನೆಯ ಜಾಡನ್ನು ಬಿಡುತ್ತದೆಂದು ಭಾವಿಸಲಾಗಿದೆ. ವಿಶೇಷವಾಗಿ ಕಡಂಬಳಗಳು ಇತರೆ ಕಡಂಬಳಗಳ ವಾಸನೆಯಿಂದ ಆಕರ್ಷಿತವಾಗಿ ಪ್ರತಿಸ್ಪಂದಿಸುತ್ತವೆ.

ಕೂಡಿಕೆ ಕುತೂಹಲಕಾರಿ ಹಾಗೂ ವೈವಿಧ್ಯಮಯ ಚಟುವಟಿಕೆ. ಗಂಡು ಕೇರೆ ಹಾವು ತನ್ನ ಜೊತೆಗೂಡಲಿರುವ ಹೆಣ್ಣು ಹಾವಿನ ಶರೀರದ ಮಧ್ಯಭಾಗ ಹಾಗೂ ಕುತ್ತಿಗೆಯನ್ನು ದವಡೆಗಳಿಂದ ಬಾಚಿ ತಬ್ಬಿಕೊಂಡು ಹೆಣ್ಣಿನ ಶರೀರದ ಉದ್ದಕ್ಕೂ ಲಯಬದ್ಧವಾಗಿ ಚಲಿಸುತ್ತಾ ಹೆಣ್ಣನ್ನು ಉನ್ಮಾದೀಕರಿಸುತ್ತದೆ. ಸರ್ಪವನದಲ್ಲಿ ಕೇರೆ ಹಾವುಗಳು ಸಾಮಾನ್ಯವಾಗಿ ಮರದ ಮೇಲೆ ಕೂಡುತ್ತವೆ. ಆ ವೇಳೆಯಲ್ಲಿ ಹೆಣ್ಣು ಹಾವು ಚಲಿಸುವುದಿಲ್ಲ. ಆದರೆ ಚಿಕ್ಕದಾಗಿರುವ ಗಂಡು ಹಾವು ಅರೆಶಿಶ್ನದ ಒಂದು ಭಾಗವನ್ನು ಹೆಣ್ಣಿನ ಶರೀರದೊಳಗೆ ತೂರಿಸುವವರೆಗೂ ಹೆಣ್ಣಿನ ಬೆನ್ನ ಮೇಲೆ ತೆವಳುತ್ತದೆ. ಒಂದು ವೇಳೆ ಹೆಚ್ಚು ಚಲಿಸಲು ಪ್ರಾರಂಭಿಸಿದರೂ ಗಂಡು ತನ್ನ ಸ್ಥಾನವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಕೆಲವು ಪ್ರಭೇದಗಳ ಎರಡು ಅಥವಾ ಮೂರು ಹಾವುಗಳಲ್ಲಿ ವೀಕ್ಷಿಸಲಾಗಿರುವ 'ನಾಟ್ಯ'ವು (ಊರ್ಧ್ವವಾಗಿ ಸುತ್ತಿಕೊಳ್ಳುವ) ಆಗಾಗ್ಗೆ ವರದಿಯಾಗುವಂತೆ ಕೂಡಿಕೆಯಲ್ಲ. ವಾಸ್ತವವಾಗಿ ಅದು ಗಂಡು ಹಾವುಗಳ ನಡುವೆ ನಡೆಯುವ ಹೋರಾಟ. ಯಾರೊಬ್ಬರೂ ಈ ಚಟುವಟಿಕೆಯ ಬಗ್ಗೆ ವಿವರಣೆ ನೀಡಿಲ್ಲವಾದರೂ ಬಹಶಃ ಇದು ಗಂಡು ಹಾವುಗಳ ನಡುವಿನ ಗಡಿ ಹೋರಾಟವಿರಬಹುದು. ಈ ನಾಟ್ಯವನ್ನು ವಿವಿಧ ಜಾತಿಯ ಹಾವುಗಳಲ್ಲಿ ಹಾಗೂ ಕೆಲವು ಉಡಗಳಲ್ಲಿ ನೋಡಲಾಗಿದೆ. ಬಂಧನದಲ್ಲಿನ ಕಡಂಬಳಗಳ ಹೋರಾಟವು ಅನೇಕ ವೇಳೆ ಸಂಪ್ರದಾಯದ ಹೋರಾಟಕ್ಕಿಂತ ಒಂದು ಇನ್ನೊಂದನ್ನು ಕೊಲ್ಲುವ ಹಂತಕ್ಕೂ ತಲುಪಬಹುದು. ಚಿಕ್ಕ ಗಂಡು ಹಾವು 'ಗೆದ್ದ' ಕಡಂಬಳದ ಆಹಾರವಾಗುತ್ತದೆ.

ಸಿಹಿ ನೀರಿನ ಹಾವುಗಳು, ನಾಗರಗಳು, ಹೆಬ್ಬಾವುಗಳು ಮತ್ತು ಕೇರೆ ಹಾವುಗಳು ಇತರೆ ಅನೇಕ ಹಾವುಗಳಂತೆಯೇ ಮೊಟ್ಟೆಗಳನ್ನಿಡುತ್ತವೆ. ಹಸಿರು ಹಾವುಗಳು, ಮಂಡಲ



ಚೌಕಳಿಯ ಬೆನ್ನೇಣು ನೀರುಹಾವು ಜನವರಿಯಲ್ಲಿ 35 ಮೊಟ್ಟೆಗಳನ್ನಿಡುತ್ತಿರುವುದು.



ಹಾವುಗಳು ಪ್ರತಿವರ್ಷ ಹಲವು ಬಾರಿ ಪೊರೆ ಬಿಡುತ್ತವೆ.
ಅವುಗಳ ಬೆಳವಣಿಗೆ ಈ ವಿಶಿಷ್ಟ ವಿಧಾನದಿಂದ ನಡೆಯುತ್ತದೆ.

ಹಾವುಗಳು, ಕಡಲ ಹಾವುಗಳು, ಮರಳ ಹೆಬ್ಬಾವುಗಳು ಮರಿಗಳಿಗೆ ಜನ್ಮ ನೀಡುತ್ತವೆ. ವಾಸ್ತವವಾಗಿ ಅವು ಶರೀರದೊಳಗೆ ಮೊಟ್ಟೆಗಳಿಗೆ ಕಾವು ನೀಡಿರುತ್ತವೆ. ಗಂಡು-ಹೆಣ್ಣು ಹಾವುಗಳು ಕೂಡುವುದಕ್ಕೂ ಮತ್ತು ಮೊಟ್ಟೆಯಿಡುವುದಕ್ಕೂ ನಡುವೆ ಸುಮಾರು 60 ರಿಂದ 80 ದಿನಗಳ ಅಂತರವಿರುತ್ತದೆ. ಸಾಮಾನ್ಯವಾಗಿ ಉಷ್ಣಪ್ರದೇಶದ ಬಹುತೇಕ ಸರೀಸೃಪಗಳಲ್ಲಿ ಮೊಟ್ಟೆಗಳಿಗೆ ಕಾವುನೀಡುವ ಕಾಲವೂ ಸಹ ಇಷ್ಟೇ ಇರುತ್ತದೆ. (ಕೆಲವು 100ಕ್ಕೂ ಹೆಚ್ಚು ದಿನಗಳ ಕಾಲ ಕಾವು ನೀಡುತ್ತವೆ). ಸಾಮಾನ್ಯವಾಗಿ 'ಸುರಕ್ಷಿತ ಸ್ಥಾನಗಳಾದ' ಇಲಿಬಿಲ, ಹುತ್ತ, ಮರದ ಪೊಟರೆ, ತೊಗಟೆ ಅಥವಾ ಕೊಳೆಯುತ್ತಿರುವ ಎಲೆಗಳ ಕೆಳಗೆ ಹೆಣ್ಣು ಹಾವುಗಳು ಮೊಟ್ಟೆಯಿಟ್ಟು ಬೇರೆಡೆಗೆ ಹೋಗುತ್ತವೆ. ನಾಗರಹಾವು, ಚೌಕಳಿ ಬೆನ್ನೇಣು ಹಾವು, ಕಡಂಬಳ, ಹೆಬ್ಬಾವು, ಕಾಳಿಂಗ ಸರ್ಪಗಳಂತಹ ಕೆಲವು ಹಾವುಗಳು ಮೊಟ್ಟೆಗಳು ಒಡೆದು ಮರಿಗಳು ಬರುವವರೆಗಾದರೂ ಮೊಟ್ಟೆಗಳ ಹತ್ತಿರವೇ ಇರುತ್ತವೆ. ಹೆಣ್ಣು ಕಾಳಿಂಗ ಸರ್ಪವು ಎಲೆಗಳನ್ನು ಒಗ್ಗೂಡಿಸಿ ವಿಶಿಷ್ಟ ಗೂಡು ರಚಿಸಿ, ಗೂಡಿನ ತಳಭಾಗದಲ್ಲಿ ಮೊಟ್ಟೆಗಳನ್ನಿಡುತ್ತದೆ. ಹೆಣ್ಣು ಹೆಬ್ಬಾವು ತನ್ನ ಮಾಂಸಖಂಡಗಳನ್ನು ಹಿಗ್ಗಿಸಿ-ಕುಗ್ಗಿಸುವ ಮೂಲಕ ಶರೀರದ ಉಷ್ಣತೆಯನ್ನು ಹೆಚ್ಚಿಸಿಕೊಂಡು ಮೊಟ್ಟೆಗಳಿಗೆ ಕಾವು ನೀಡುತ್ತದೆ.

ಮೊಟ್ಟೆಯೊಳಗಿರುವ ಮರಿಹಾವು ತನ್ನ ಮೂಗಿನ ತುದಿಯಲ್ಲಿ ಮುಂಚಾಚಿರುವ ವಿಶಿಷ್ಟವಾದ 'ಮೊಟ್ಟೆಹಲ್ಲಿ'ನಿಂದ ಚರ್ಮದಂತಿರುವ ಮೊಟ್ಟೆಯ ಹೊರ ಕವಚವನ್ನು ಸೀಳಿಕೊಂಡು ಹೊರಬರುತ್ತದೆ. ಅನಂತರ 'ಮೊಟ್ಟೆ ಹಲ್ಲು'ಗಳು ನಶಿಸಿಹೋಗುತ್ತವೆ. ಮೊಟ್ಟೆಗಳಿಂದ ಮರಿಗಳು ಹೊರಬಂದ ಮೇಲೆ ಸಾಮಾನ್ಯವಾಗಿ ಹೆಣ್ಣು ಹಾವು ಮರಿಗಳನ್ನು ತೊರೆದು ಹೋಗುತ್ತದೆ. ಉಳಿದಿರುವ ಲೋಳೆಯಿಂದಾಗಿ ಮರಿಹಾವುಗಳಲ್ಲಿ ಸಾಕಷ್ಟು ಕೊಬ್ಬಿರುತ್ತದೆ. ಸಾಮಾನ್ಯವಾಗಿ ಅವು ಒಂದು ವಾರದ ಕಾಲ ಒಟ್ಟಿಗೆ ಇದ್ದು ಅನಂತರ ಚದುರುತ್ತವೆ. ಆಗತಾನೆ ಹುಟ್ಟಿದ ಅನೇಕ ಮರಿ ಹಾವುಗಳು ದೊಡ್ಡ ಎರೆಹುಳಗಳಷ್ಟೂ ದಪ್ಪಗಿರುವುದಿಲ್ಲ. ಆದ್ದರಿಂದ ಮರಿಹಾವುಗಳು ಪಕ್ಷಿ, ಮುಂಗುಸಿ, ಉಡ ಮತ್ತು ಕಪ್ಪೆಗಳಂತಹ ಅನೇಕ ಪರಭಕ್ಷಕ ಜೀವಿಗಳಿಗೆ ಆಹಾರವಾಗುವ ಸಾಧ್ಯತೆಯಿರುತ್ತದೆ. ಆಗತಾನೇ ಹುಟ್ಟಿದ ಹಾವಿನ ಮರಿ ಬದುಕುಳಿಯುವ ಅವಕಾಶ ತುಂಬ ಕಡಿಮೆ. ಮರೆಮಾಚಿಕೊಳ್ಳುವ ಸಹಜ ಪ್ರವೃತ್ತಿಯಿಂದ, ಸುತ್ತಲ ಪರಿಸರದಂತೆ ಮೈ ಬಣ್ಣಗಳಿರುವ ತಮ್ಮ ಕಪಟರೂಪದಿಂದ ; ಅಪಾಯಕಾರಿ ಪ್ರಭೇದಗಳ ಮೈಬಣ್ಣಗಳ ಹಾಗೂ ಆಕಾರಗಳ ಅನುಕರಣೆಯಿಂದ ಮತ್ತು ಕೆಲವೊಮ್ಮೆ ಕೇವಲ ಗೊಡ್ಡು ಬೆದರಿಕೆಯಿಂದ ಮರಿಹಾವುಗಳು ಜೀವನದ ಅತ್ಯಂತ ಕ್ಲಿಷ್ಟ ಕಾಲವನ್ನು ದಾಟುತ್ತವೆ. ಆಹಾರ ಹೆಚ್ಚಾಗಿ ದೊರಕಿದಲ್ಲಿ ಹಾವುಮರಿ ಬೇಗ ಬೆಳೆಯುತ್ತದೆ. ಮೊದಲ ಎರಡು ಅಥವಾ ಮೂರು ತಿಂಗಳಲ್ಲಿ ಅದು ತನ್ನ ಗಾತ್ರವನ್ನು ಎರಡು ಅಥವಾ ಮೂರು ಪಟ್ಟು ಹೆಚ್ಚಿಸಿಕೊಳ್ಳುತ್ತದೆ (ಮರಿಹಾವುಗಳು ಹೊರ ಬರುವ ಕಾಲಕ್ಕೆ ಸರಿಯಾಗಿ ಹೆಚ್ಚಿನ ಆಹಾರ ಅವಕ್ಕೆ ಸಾಮಾನ್ಯವಾಗಿ ದೊರಕುತ್ತದೆ. ಉದಾಹರಣೆಗೆ, ಗೊದಮೊಟ್ಟೆಗಳು ಅದೇ ಕಾಲಕ್ಕೇ ಪ್ರೌಢವಾಗುತ್ತವಾದ್ದರಿಂದ ಆಹಾರ ಸಮೃದ್ಧಿಯಾಗಿ ದೊರಕುತ್ತದೆ). ಬಂಧನದಲ್ಲಿದ್ದಾಗ ಭಾರತದ ಶಿಲಾ ಹೆಬ್ಬಾವು ಸುಮಾರು 2 ವರ್ಷಗಳಲ್ಲಿ 1

ಮೀಟರಿಂದ 3.5 ಮೀಟರ್‌ಗಳಷ್ಟು ಉದ್ದ ಬೆಳೆಯುತ್ತದೆ! ಸಾಮಾನ್ಯವಾಗಿ ಮರಿ ಹಾವುಗಳು ತಂದೆ ತಾಯಿಗಳ ಪಡಿಯಚ್ಚಿನಂತಿರುತ್ತವೆ. ಆದರೆ ಅನೇಕ ಮರಿಹಾವುಗಳು ತಂದೆ ತಾಯಿಗಳಿಗಿಂತ ಭಿನ್ನವಾಗಿ ಕಾಣುವುದರಿಂದ ಅವನ್ನು ಗುರುತಿಸುವಾಗ ಗೊಂದಲ ಉಂಟಾಗುತ್ತದೆ. ಈ ಪುಸ್ತಕದಲ್ಲಿ ವಿವರಿಸಲಾಗಿರುವ 30 ಪ್ರಭೇದಗಳಲ್ಲಿ ತಂದೆ-ತಾಯಿಗಳಿಗಿಂತ ಭಿನ್ನವಾಗಿ ಕಾಣುವ ಮರಿಹಾವುಗಳ ಬಗ್ಗೆಯೂ ತಿಳಿಸಲಾಗಿದೆ.

ಒಂದು ಅಥವಾ ಎರಡು ತಿಂಗಳಲ್ಲಿ ಮರಿಹಾವು ತನ್ನ ಚರ್ಮದ ಗಾತ್ರಕ್ಕಿಂತ ದೊಡ್ಡದಾಗಿ ಬೆಳೆಯುತ್ತದೆ. ಹೀಗಾಗಿ ಮರಿಹಾವು ಆ ಚರ್ಮದಿಂದ ಹೊರಕ್ಕೆ ತೆವಳಿ ಬರುತ್ತದೆ ಅಥವಾ ಆ ಚರ್ಮವನ್ನು (ಪೊರೆಯನ್ನು) ಕಳಚುತ್ತದೆ. ಪೊರೆಯನ್ನು ಕಳಚುವ ಒಂದು ವಾರದ ಹಿಂದೆ-ಮುಂದೆ ಹಾವು ಅಸ್ವಸ್ಥ ಸ್ಥಿತಿಯಲ್ಲಿರುತ್ತದೆ. ಹಾವಿನ ಶರೀರದ ಮತ್ತು ಕಣ್ಣಿನ ಬಣ್ಣ ನೀಲಿ ಅಥವಾ ಮುಸುಕಿದ ಮೋಡದಂತಾಗುತ್ತದೆ. ಇನ್ನೇನು ಪೊರೆ ಬಿಡುವ ಮುನ್ನ ಕಣ್ಣುಗಳು ಸ್ವಚ್ಛವಾಗುತ್ತವೆ. ತನ್ನ ಹಳೆಯ ಚರ್ಮ ಕಡಿತವುಂಟು ಮಾಡುತ್ತಿದೆಯೇನೋ ಎಂಬಂತೆ ಹಾವು ಉದ್ದೇಶಪೂರ್ವಕವಾಗಿ ಪೊರೆ ಕಳಚಲು ಪ್ರಯತ್ನಿಸುತ್ತದೆ. ಪೊರೆ ಕಳಚಿದನಂತರ ಹೊಸ ಚರ್ಮದಿಂದ ಕೂಡಿದ ಹಾವು ಮಿರಮಿರನೆ ಮಿಂಚುತ್ತಿರುತ್ತದೆ.

ಪೊರೆಬಿಡುವ ಸಮಯದಲ್ಲಿಯೇ ಹಾವಿನ ಕಣ್ಣುಗಳ ಕವಚಗಳೂ ಹೊರಬರುತ್ತವೆ. ತಮ್ಮ ಹಲ್ಲುಗಳ, ವಿಷದಂತಗಳ ಹಾಗೂ ನಾಲಿಗೆಯ ಎರಡೂ ತುದಿಗಳ ಚರ್ಮವನ್ನು ಹಾವುಗಳು ಇತರೆ ಸಮಯದಲ್ಲಿ ಹೊರ ಹಾಕುತ್ತವೆ. ಇದರಿಂದ ನಾಲಿಗೆಯ ತುದಿಗಳ ಚರ್ಮ ಹೆಚ್ಚು ಸೂಕ್ಷ್ಮಗ್ರಾಹಿಯಾಗಿರುತ್ತದೆ.

ಹಾವುಗಳ ಸ್ವಾಭಾವಿಕ ಜೀವಿತ ಕಾಲ ನಿಜವಾಗಿ ಎಷ್ಟೆಂಬುದು ಯಾರಿಗೂ ಗೊತ್ತಿಲ್ಲ. ವೈವಿಧ್ಯಮಯವಾದ ಈ ಸರೀಸೃಪಗಳ ಬಗ್ಗೆ ನಮಗೆ ತಿಳಿದಿಲ್ಲದಿರುವ ಅನೇಕ ವಿಷಯಗಳಲ್ಲಿ ಅವುಗಳ ಜೀವಿತ ಕಾಲವೂ ಒಂದು. ಅಮೆರಿಕಾದ ಪ್ರಾಣಿ ಸಂಗ್ರಹಾಲಯಗಳಲ್ಲಿ ಹಾಗೂ ವ್ಯಕ್ತಿಗಳು ಸಾಕಿದ್ದ ಭಾರತದ ಕೆಲವು ಕುತೂಹಲಕಾರಿ ಹಾವುಗಳ ಜೀವಿತದ ಕಾಲಾವಧಿಯು ಹೀಗಿದೆ :-

| *ಹಾವು* | *ವರ್ಷ* | *ತಿಂಗಳು* | *ವ್ಯಕ್ತಿ ಅಥವಾ ಸಂಸ್ಥೆ* |
|---|---|---|---|
| ಭಾರತದ ಹೆಬ್ಬಾವು | 34 | 2 | ಯೂಜೆನಿಯ ಎಸ್. ಶೆಓರಾಕ್ |
| ಸಾಮಾನ್ಯ ಮರಳ ಹೆಬ್ಬಾವು | 13 | 10 | ಫಿಲಡೆಲ್ಫಿಯ ಪ್ರಾಣಿಸಂಗ್ರಹಾಲಯ |
| ಭಾರತದ ಕೇರೆ ಹಾವು | 10 | 7 | ಸ್ಟೇಟನ್ ದ್ವೀಪದ ಪ್ರಾಣಿಸಂಗ್ರಹಾಲಯ |
| ಪಟ್ಟೆ ಕಡಂಬಳ | 11 | 6 | ಸೈಂಟ್ ಲೂಯಿಸ್ ಪ್ರಾಣಿಸಂಗ್ರಹಾಲಯ |
| ನಾಗರಹಾವು | 21 | 6 | ಲಿಂಕನ್ ಪ್ರಾಣಿ ಸಂಗ್ರಹಾಲಯ |
| ಗರಗಸ ಪುರುಪೆಯ ಮಂಡಲಹಾವು | 10 | 3 | ಸಾನ್ ಡೈಗೊ ಪ್ರಾಣಿಸಂಗ್ರಹಾಲಯ |

**ಚಲನೆ :**

ಅನೇಕ ಹಾವುಗಳು ಮರ ಹತ್ತಬಲ್ಲವು. ಬಹುತೇಕ ಎಲ್ಲ ಹಾವುಗಳೂ ಈಜಬಲ್ಲವು. ಒಂದು ಹಾವು ಜಿಗಿದು ಸ್ವಲ್ಪ ಹೊತ್ತು ಕಾಗದದ ರಾಕೆಟ್ಟಿನಂತೆ ಗಾಳಿಯಲ್ಲಿ ತೇಲುತ್ತದೆ (ಹಾರುವ ಹಾವನ್ನು ನೋಡಿ). ಕಂಚು ಬೆನ್ನಿನ ಹಾವುಗಳಂತೆ ಬಹುತೇಕ ಮರದ ಹಾವುಗಳು ಮರಗಳನ್ನು ಹತ್ತುವುದಕ್ಕೆ ಮೈ ಹೊಂದಾಣಿಕೆಗಳನ್ನು ಪಡೆದಿವೆ. ಅವು ತೆಳುವಾದ ಹಾಗೂ ಶಕ್ತಿಯುತ ಶರೀರಗಳನ್ನು ಮತ್ತು ಏಣುಗಳಿರುವ ಹುರುಪೆಗಳನ್ನು ಹೊಂದಿವೆ. ಕಡಲಹಾವುಗಳು ಮುಂದೆ ಸಾಗಲು ಹುಟ್ಟುಗಳಂತಿರುವ ತಮ್ಮ ಬಾಲವನ್ನು ಉಪಯೋಗಿಸುತ್ತವೆ ಮತ್ತು ಅವು ಸುಮಾರು 5 ಗಂಟೆಗಳಷ್ಟು ಕಾಲ ಉಸಿರು ಕಟ್ಟಬಲ್ಲವು. ಮರಳ ಹೆಬ್ಬಾವು ಮತ್ತು ಕವಚಬಾಲದ ಹಾವುಗಳಂತೆ ಕೆಲವು ಭೂವಾಸಿ ಹಾವುಗಳಲ್ಲಿ ಗೋರುಸಲಿಕೆಯಂತಹ ಚೂಪಾದ ತುದಿಯುಳ್ಳ ಬಲಿಷ್ಠವಾದ ತಲೆಯಿರುತ್ತದೆ. ಇಂತಹ ತಲೆ ವಿಶೇಷವಾಗಿ ಬಿಲ ಕೊರೆಯುವುದಕ್ಕೆ ಸಹಾಯಕ.

ಜೀವಯಂತ್ರ ವಿಜ್ಞಾನದ ಬಗ್ಗೆ ವಿಶೇಷ ಪಾಂಡಿತ್ಯವಿರುವ ಪ್ರೊ. ಕಾರ್ಲ್ ಗ್ಯಾನ್ಸ್ ಹಾವುಗಳ ಚಲನೆಯ ಬಗ್ಗೆ ಹೀಗೆ ಬರೆದಿದ್ದಾರೆ : "ಹಾವುಗಳು ಚಲಿಸಲು ನಾಲ್ಕು ರೀತಿಯ ವಿಧಾನಗಳನ್ನು ಬಳಸುತ್ತವೆ". ಹಾವುಗಳು ಚಲಿಸುವಾಗ ಅವುಗಳ ಶರೀರ ಮತ್ತು ಸುತ್ತಲ ವಸ್ತುಗಳ ನಡುವೆ ನಡೆದ ಘರ್ಷಣೆಯಲ್ಲಿ ಆಗುವ ವ್ಯತ್ಯಾಸಗಳನ್ನು ಎಲ್ಲ ಹಾವುಗಳೂ ಬಳಸುತ್ತವೆ. ಕೆಲವೇ ಹಾವುಗಳು ಕೊನೆಯ ಎರಡು ವಿಧಾನಗಳನ್ನು ಉಪಯೋಗಿಸುತ್ತವೆ. ಚಲಿಸುವಾಗ ಶರೀರದ ಮುಂಭಾಗ ಹಾಗೂ ಹಿಂಭಾಗಗಳಲ್ಲಿಯೇ ವ್ಯತ್ಯಾಸವಿರಬಹುದು. ಹಾವುಗಳಿಗೆ ವಯಸ್ಸಾದಂತೆ ಮತ್ತು ತೂಕ ಹೆಚ್ಚಾದಂತೆ ಅಥವಾ ಅವು ಉದ್ವೇಗಕ್ಕೊಳಗಾದಾಗ, ಅವುಗಳ ಚಲನಾ ವಿಧಾನವೂ ಬದಲಾಗಬಹುದು.

ಮೊದಲನೆಯದು ಬಳುಕುವ ಅಥವಾ ಹಾವಿನ ರೀತಿಯ ಚಲನೆ. ಹಾವು ತನ್ನ ಶರೀರವನ್ನು ಹಲವಾರು 'S' ಆಕಾರದ ಡೊಂಕುಗಳ ಆಕಾರ ಪಡೆಯುವಂತೆ ಮಾಡುತ್ತದೆ. ಈ ತನ್ನ ಡೊಂಕುಗಳಿಂದ ನೆಲದ ಮೇಲಿರಬಹುದಾದ ಹುಲ್ಲು ಕಡ್ಡಿಗಳು, ಕಲ್ಲು, ಮರಳು, ಕೊಂಬೆ ಮತ್ತು ತೊಗಟೆಯ ತುಂಡುಗಳು ಮುಂತಾದವುಗಳನ್ನು ಪಕ್ಕಕ್ಕೆ ಹಾಗೂ ಹಿಂದಕ್ಕೆ ದೂಡುತ್ತದೆ. ಹೀಗೆ ಶರೀರದ ತಳಭಾಗವು ಜಾರಿ ಅದರ ತೂಕ ಮುಂದೆ ಸಾಗುತ್ತದೆ. ಅದೇ ವೇಳೆಯಲ್ಲಿ ಚಲಿಸುವ ಡೊಂಕುಗಳ ಪಾರ್ಶ್ವಗಳು ಶರೀರವನ್ನು ಮುಂದಕ್ಕೆ ತಳ್ಳುತ್ತವೆ. ಬಹುತೇಕ ಮೀನುಗಳಲ್ಲಿರುವಂತೆಯೇ ಹಾವುಗಳಲ್ಲಿಯೂ ಚಲನೆಯ ಅಲೆಗಳು ತಲೆಯ ಭಾಗದಿಂದ ಬಾಲದಕಡೆ ಹರಿಯುತ್ತವೆ. ಹಾವುಗಳು ಮತ್ತೊಂದು (ರಾಗಮಾಲಿಕೆ) ವಿಧಾನದಲ್ಲಿಯೂ ಚಲಿಸಬಹುದು. ಈ ವಿಧಾನದಲ್ಲಿ ಶರೀರದ ಒಂದು ಭಾಗ ನೆಲದ ಮೇಲೆ ಸ್ಥಗಿತವಾಗಿರುತ್ತದೆ ; ಮತ್ತೊಂದು ಭಾಗವಷ್ಟೇ ಹೊಸ ಸ್ಥಳಕ್ಕೆ ಚಾಚಿಕೊಳ್ಳುತ್ತದೆ. ಅಲ್ಲಿ ತಲೆ ಮತ್ತು ಕುತ್ತಿಗೆ ಸುತ್ತಿಕೊಂಡು ಭದ್ರವಾಗಿ ಕಚ್ಚಿಕೊಳ್ಳುತ್ತದೆ. ಅನಂತರ ಶರೀರದ ಮಿಕ್ಕ ಭಾಗವನ್ನು ಹಾವು ಅಲ್ಲಿಗೆ ಎಳೆದುಕೊಳ್ಳುತ್ತದೆ. ಮರದ ಹಾವುಗಳು ಈ ವಿಧಾನವನ್ನು

ಅನುಸರಿಸುತ್ತವೆ. ಅನಂತರ ಶರೀರದ ಮುಂಭಾಗವನ್ನು ಹೊರಚಾಚಿ ಇನ್ನೊಂದು ಸ್ಥಳವನ್ನು ಅವುಕಿ ಹಿಡಿದುಕೊಳ್ಳುತ್ತವೆ. ಆಮೇಲೆ ಶರೀರದ ಮಿಕ್ಕ ಭಾಗವನ್ನು ಸಡಿಲವಾಗಿಸಿ ಹಗ್ಗದಂತೆ ಮೇಲಕ್ಕೆಳೆದುಕೊಳ್ಳುತ್ತವೆ.

ರೇಖೀಯ ಅಥವಾ ನೀಟಾದ ಚಲನೆಯು ಪ್ರಧಾನವಾಗಿ ಹೆಬ್ಬಾವುಗಳು ಹಾಗೂ ಕೆಲವು ರೊಣಪ (ದಪ್ಪ) ಶರೀರದ ಮಂಡಲ ಹಾವುಗಳಲ್ಲಿದೆ. ಈ ಹಾವುಗಳಲ್ಲಿ ಚರ್ಮವು ಶರೀರದ ತಳಭಾಗದಿಂದ ಬೇರ್ಪಟ್ಟು ಸಡಿಲವಾಗಿದೆ ; ಉದ್ದನೆಯ ಮಾಂಸಖಂಡಗಳು ಸಡಿಲವಾಗಿರುವ ಈ ಚರ್ಮವನ್ನು ಬೆನ್ನುಮೂಳೆ, ಮಾಂಸಖಂಡ ಮತ್ತು ಶರೀರದ ಒಳಾಂಗಗಳ ಮೇಲೆ ಅಂಗಿಯೋಪಾದಿಯಲ್ಲಿ ಹಿಂದಕ್ಕೂ ಮುಂದಕ್ಕೂ ಎಳೆದಾಡಬಹುದು. ಚರ್ಮದ ಒಂದು ಭಾಗ ಶರೀರದಿಂದ ಸ್ವಲ್ಪ ಮುಂದೆ ಅಂಟಿಕೊಳ್ಳುತ್ತದೆ. ನೆಲಕ್ಕೆ ಅಂಟಿಕೊಂಡಿರುವ ಚರ್ಮ ಹಾಗೂ ಪಕ್ಕೆಲುಬುಗಳನ್ನು ಕೂಡಿಸುವ ಮಾಂಸಖಂಡಗಳು ಆಗ ಕುಗ್ಗಿ ಶರೀರವನ್ನು ಮುಂದಕ್ಕೆಳೆಯುತ್ತವೆ. ಒಂದು ಸಾರಿ ಆ ಮಾಂಸಖಂಡಗಳು ಕನಿಷ್ಠ ಗಾತ್ರಕ್ಕೆ ಕುಗ್ಗಿದ ಮೇಲೆ, ಎರಡನೇ ಜೊತೆ ಮಾಂಸಖಂಡಗಳು ಚರ್ಮವನ್ನು ನೆಲದಿಂದ ಬಿಡಿಸಿ ಶರೀರದಿಂದ ಮತ್ತಷ್ಟು ಮುಂದಕ್ಕೆ ಸಾಗುವಂತೆ ಮಾಡುತ್ತವೆ. ಈ ರೀತಿಯ ಚಲನೆಯ ಪುನರಾವರ್ತನೆಯು ಕಂಬಳಿ ಹುಳಗಳಲ್ಲಿರುವಂತೆ ಉದರ-ಚರ್ಮ ಸ್ಥಳ ಬದಲಿಸುವಂತೆ ಮಾಡುತ್ತದೆ. ಹೀಗೆ ಹಾವು ನೇರವಾದ ರೇಖೆಯಲ್ಲಿ ಚಲಿಸುತ್ತದೆ. ನೇರರೇಖೆಯ ಚಲನೆಯಿಂದಾಗಿ ಈ ಚಲನಾ ವಿಧಾನವನ್ನು ರೇಖೀಯ ಚಲನೆ ಎಂದು ಕರೆಯಲಾಗಿದೆ. ಕೊನೆಯ ಮತ್ತು ಅತ್ಯಂತ ರೋಚಕವಾದ ಚಲನಾ ವಿಧಾನವೆಂದರೆ ಉರುಳುವ ಚಲನೆ (Side-winding). ಸಾಮಾನ್ಯವಾಗಿ ಈ ರೀತಿಯ ಚಲನಾ ವಿಧಾನವನ್ನು ಮರಳುಗಾಡಿನ ಕೆಲವು ಮಂಡಲ ಹಾವುಗಳು ಅನುಸರಿಸುತ್ತವೆ. ಅತ್ಯಂತ ಉದ್ವೇಗಕ್ಕೆ ಒಳಗಾದಾಗ ಕೆಲವು ಹಾವುಗಳು ಇಂಥದೇ ಸ್ವಲ್ಪ ಬೇರೆಯಾಗಿರುವ ಚಲನೆಯನ್ನು ಅನುಸರಿಸುತ್ತವೆ. ಈ ವಿಧಾನದಲ್ಲಿ ಹಾವು ತನ್ನ ಶರೀರದ ಒಂದು ಭಾಗವನ್ನು ನೆಲದಿಂದ ಮೇಲೆತ್ತಿ ಮತ್ತೊಂದು ಸ್ಥಳದಲ್ಲಿಟ್ಟು ಜಾಡಿನಿಂದ ಜಾಡಿಗೆ ಉರುಳುತ್ತಾ ಮುಂದೆ ಹೋಗುತ್ತದೆ. ಮರಳುಗಾಡುಗಳಲ್ಲಿ ಹಿಂತಳ್ಳಲು ಪಾರ್ಶ್ವ ಹೊರಚಾಚುಗಳಿರುವುದಿಲ್ಲ ಮತ್ತು ಮೇಲ್ಮೈಯು ತುಂಬಾ ಬಿಸಿಯಾಗಿದ್ದು ಸ್ಪರ್ಶವು ಹೆಚ್ಚು ಹೊತ್ತಿನ ಅಹಿತವಾಗಿರುತ್ತದೆ. ಆದ್ದರಿಂದ ನುಣುಪಾದ ಮರಳುಗಾಡುಗಳಲ್ಲಿ ಮುಖ್ಯವಾಗಿ ವೇಗದಿಂದ ಹಾಗೂ ಸತತವಾಗಿ ಚಲಿಸಲು ಈ ವಿಧಾನ ಅನುಕೂಲಕರ.

### ಶತ್ರುಗಳು ಮತ್ತು ರಕ್ಷಣೆ :

ಇರುವೆ ಮತ್ತು ಜೀರುಂಡೆಗಳಿಂದ ಹಿಡಿದು ಇಲಿಗಳವರೆಗೆ, ಮುಂಗುಸಿ, ಉಡ, ಜಲಪಕ್ಷಿಗಳು, ಬೇಟೆಯಾಡುವ ಪಕ್ಷಿಗಳು ಮುಂತಾದ ಪರಭಕ್ಷಕ ಜೀವಿಗಳ ಸೈನ್ಯವು ಹಾವುಗಳ ಮೊಟ್ಟೆ ಮತ್ತು ಮರಿಗಳನ್ನು ತಿಂದುಹಾಕುತ್ತದೆ. ಬೆಳೆದ ದೊಡ್ಡ ಹಾವುಗಳಿಗೆ ಮಾತ್ರ ಮನುಷ್ಯನಿಂದ ಕಿರುಕುಳವಿದೆ. ಮುಂಗುಸಿ ಮತ್ತು ಹಿಂಸ್ರಪಕ್ಷಿಗಳು ಚಿಕ್ಕದಾದ

ಹಾವುಗಳನ್ನೂ ಹಿಡಿದು ತಿನ್ನುತ್ತವೆ. ಮುಂಗುಸಿಯು ಹಾವುಗಳ ಆಜನ್ಮ ಶತ್ರು. ಪುಟ್ಟ ಬಕಾಸುರ ಪ್ರಾಣಿಯಾದ ಮುಂಗುಸಿಯು ಚಲಿಸುವ ಯಾವುದೇ ವಸ್ತುವಿನ ಮೇಲೂ ಅದು ತನಗಿಂತ ಚಿಕ್ಕದಾಗಿದ್ದ ಪಕ್ಷದಲ್ಲಿ, ತಕ್ಷಣ ಮೇಲೆರಗುತ್ತದೆ. ಒಬ್ಬ ವ್ಯಕ್ತಿ ಅನಿರೀಕ್ಷಿತವಾಗಿ ಹಾವಿನ ಮೇಲೆ ಕಾಲಿಟ್ಟಾಗ ಸಾಕಿದ್ದ ಮುಂಗುಸಿಯು ಅವನ ಕಾಲ ಕೆಳಗೆ ನುಗ್ಗಿ ಅದನ್ನು (ಕುಕ್ರಿ ಹಾವು) ಹಿಡಿದಿದ್ದನ್ನು ನಾವು ನೋಡಿದ್ದೇವೆ. ಆ ಕುಕ್ರಿ ಹಾವು ನಿರುಪದ್ರವಿ ಎಂದು ನಮಗೆ ಗೊತ್ತು. ಒಂದು ವೇಳೆ ಈ ಘಟನೆಯು ಬೇರೆಯವರ ತೋಟದಲ್ಲಿ ನಡೆದಿದ್ದರೆ, ಮುಂಗುಸಿಯು ಮನುಷ್ಯರನ್ನು ಮಾರಕ ಹಾವುಗಳ ಕಡಿತಗಳಿಂದ ರಕ್ಷಿಸುತ್ತದೆಂಬ ಪ್ರಶಂಸೆ ಅದಕ್ಕೆ ಸಿಗುತ್ತಿತ್ತು.

ಹಾವುಗಳು ವಿವಿಧ ಪರಭಕ್ಷಕಗಳಿಂದ ರಕ್ಷಿಸಿಕೊಳ್ಳಲು ವಿವಿಧ ರೀತಿಯ ರಕ್ಷಣಾ ವಿಧಾನಗಳನ್ನು ಹೊಂದಿವೆ. ಕೆಲವು (ಮುಖ್ಯವಾಗಿ ರಸೆಲ್ಸ್ ಮಂಡಲಹಾವು, ಹೆಬ್ಬಾವು ಮತ್ತು ರಾಜ ಸರ್ಪಗಳು) ರಭಸವಾಗಿ ಉಸಿರಾಡಿ ಬುಸುಗುಟ್ಟುತ್ತವೆ. ಕೆಲವು ಹಾವುಗಳು ಪೀಡಕರನ್ನು ಹೆದರಿಸಿ ಓಡಿಸಲು ತಮ್ಮ ಶರೀರ ಮತ್ತು ಕುತ್ತಿಗೆಯನ್ನು ಹಿಗ್ಗಿಸುತ್ತವೆ. ಇದರಲ್ಲಿ ನಾಗರಹಾವಿನದಂತೂ ಅತ್ಯಂತ ಭವ್ಯವಾದ ಪ್ರದರ್ಶನ. ಆದರೆ ನಿರುಪದ್ರವಿಯಾದ ನೀರು ಹಾವುಗಳೂ ಉಬ್ಬಿ ಎದ್ದು ನಿಂತುಕೊಂಡು ಅಪಾಯಕಾರಿ ಹಾವುಗಳಂತೆ ತೋರಿಸಿಕೊಳ್ಳುತ್ತವೆ. ಕೆಲವು ಹಾವುಗಳು ಚಲಿಸದೆ ಹಾಗೆಯೇ ನಿಂತು ಶತ್ರುಗಳು ಗಮನಿಸದೆ ಮುಂದೆ ಹೋದಾವೆಂದು ಆಶಿಸುತ್ತವೆ. ಕೆಲವು ಹಾವುಗಳು ತಮ್ಮ ಶರೀರವನ್ನು ತಿರುಚಿಕೊಂಡು ಕಲ್ಲಿನಂತೆ ಜಡವಾಗಿ ಸುತ್ತಲಿನ ವಸ್ತುಗಳ ಮಧ್ಯೆ ಮರೆಮಾಚಿಕೊಳ್ಳುತ್ತವೆ. ಹಾವನ್ನು ಹಿಡಿದಾಗ, ಅದು ಮಲವನ್ನು ಹೊರಗೆ ಹಾಕಬಹುದು, ಗ್ರಂಥಿಯಿಂದ ವಾಸನಾದ್ರವ್ಯವನ್ನು ಚಿಮ್ಮಬಹುದು ಅಥವಾ ಕಕ್ಕಬಹುದು. ಕುಕ್ರಿ ಮತ್ತು ಹುಳ–ಹಾವುಗಳಂತಹ ಕೆಲವು ತಮ್ಮ ಬಾಲದ ತುದಿಯಿಂದ ಚುಚ್ಚಲು ಪ್ರಯತ್ನಿಸುತ್ತವೆ. ಬಹುಶಃ ಇದರಿಂದಾಗಿಯೇ ಬಾಲದಿಂದ ವಿಷಚುಚ್ಚುವ ಹಾವುಗಳ ಕಟ್ಟುಕಥೆಗಳು ಹರಡಿರಬೇಕು. ರಕ್ಷಣಾ ವಿಧಾನ ಎಂತಹುದೇ ಇದ್ದರೂ, ವಿಷದ ಹಾವುಗಳು ಮನುಷ್ಯನಷ್ಟು ದೊಡ್ಡ ಪ್ರಾಣಿಗಳ ಮೇಲೆ ಆಕ್ರಮಣ ಮಾಡುವುದಿಲ್ಲ. ಕೆಣಕಿದಾಗ, ತುಳಿದಾಗ ಅಥವಾ ಗಾಯಗೊಳಿಸಿದಾಗ ಹಾಗೂ ವಿಧಿಯಿಲ್ಲದಾಗ ಮಾತ್ರ ಹಾವುಗಳು ಸಾಮಾನ್ಯವಾಗಿ ಕಚ್ಚುತ್ತವೆ. ಹಾವಿನ ಅತಿ ಮುಖ್ಯ ರಕ್ಷಣಾ ವಿಧಾನ ಮರೆಮಾಚಿಕೊಳ್ಳುವುದು. ಹಾವುಗಳು ಇರುವ ಸ್ಥಳಗಳಲ್ಲಿಯೂ ಅವು ಕಂಡುಬರುವುದು ಅಪರೂಪ. ಕೆಲವು ಹಾವುಗಳು ಮನುಷ್ಯನ ಸಂಪರ್ಕವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದಲೇ ತಮ್ಮ ಸ್ವಭಾವಗಳನ್ನು ಬದಲಿಸಿಕೊಳ್ಳುವಂತೆ ಕಾಣುತ್ತವೆ. ಉದಾಹರಣೆಗೆ, ಬೆಳಗಿನ ಹೊತ್ತು ಚಟುವಟಿಕೆಯಿಂದಿರುವ ಹಾವು ಹೆಚ್ಚೆಚ್ಚು ನಿಶಾಚರಿಯಾಗಬಹುದು.

### ಹಾವು ಹಿಡಿಯುವವರು :

ಭಾರತದಲ್ಲಿ ಕೆಲವರು ಹಾವುಗಳನ್ನು ಕೊಲ್ಲುತ್ತಾರೆ ; ಹಲವರು ಪೂಜಿಸುತ್ತಾರೆ. ಸಾಮಾನ್ಯವಾಗಿ ಹಾವುಗಳೆಂದರೆ ಎಲ್ಲರಿಗೂ ಭಯ. ಜಗತ್ತಿನ ಬಹುತೇಕ



ಪುದುಕೋಟೆಯ ದೇವಸ್ಥಾನದಲ್ಲಿರುವ ನಾಗರಕಲ್ಲುಗಳು



ಚರ್ಮಕ್ಕಾಗಿ ಹಾವುಗಳ ಮಾರಣ ಹೋಮ

ಭಾಗಗಳಲ್ಲಿರುವಂತೆ, ಸರೀಸೃಪಗಳಲ್ಲೇ ಅತ್ಯಂತ ವಿಸ್ಮಯಕಾರಿಯಾದ ಈ ಜೀವಿಗಳ ಬಗ್ಗೆ ಕೆಲವೇ ಜನ ತಾಳ್ಮೆಯ ಹಾಗೂ ತಾರ್ಕಿಕವಾದ ದೃಷ್ಟಿ ಹೊಂದಿದ್ದಾರೆ. ಕೆಲವರು ಮಾತ್ರ ಹಾವುಗಳು ಅಮೂಲ್ಯ ಹಾಗೂ ಉಪಯುಕ್ತ ಎಂಬ ಅಭಿಪ್ರಾಯವನ್ನು ಒಪ್ಪುತ್ತಾರೆ. ನಾವು ಹಾವುಗಳನ್ನು ರಕ್ಷಿಸುವುದಕ್ಕೆ ಅವು ಇಲಿಗಳನ್ನು ನಾಶಪಡಿಸುವುದರಿಂದ ಉಂಟಾಗುವ ಆರ್ಥಿಕ ಲಾಭವೇ ಸಾಕು.

ಬಹಳಷ್ಟು ಜನ ಹಾವುಗಳಿಂದ ದೂರವಿರಲು ಪ್ರಯತ್ನಿಸಿದರೆ, ಕೆಲವರು ನಾನಾ ಕಾರಣಗಳಿಗಾಗಿ ಹಾವುಗಳನ್ನು ಹಿಡಿಯಲು ಹಾತೊರೆಯುತ್ತಾರೆ. ಹಾವುಗಳನ್ನು ಹಿಡಿಯುವ ಹಾಗೂ ಹಾವಿನ ಬಗ್ಗೆ ಅತಿ ಹೆಚ್ಚು ತಿಳುವಳಿಕೆಯುಳ್ಳವರಲ್ಲಿ ಆಂಧ್ರ ಪ್ರದೇಶದ ಮತ್ತು ತಮಿಳುನಾಡಿನ ಇರುಳರಂಥ ಗುಡ್ಡಗಾಡು ಜನರು ಮೊದಲಿಗರು. ಒಂದು ಕಾಲಕ್ಕೆ ಬೃಹತ್ತಾಗಿದ್ದ ಚರ್ಮ ಉದ್ಯಮಕ್ಕೆ ಇವರು ಕಳೆದ ನಾಲ್ಕೈದು ತಲೆಮಾರುಗಳಿಂದ ಹಾವುಗಳ ಚರ್ಮವನ್ನು ಒದಗಿಸುವುದರಲ್ಲಿ ಪ್ರಮುಖರಾಗಿದ್ದರು. ತಮಿಳುನಾಡಿನ ಪುದುಕೋಟೆ ಹಾಗೂ ಇತರೆ ಪ್ರದೇಶಗಳಲ್ಲಿ ಅಂಬ್ಲಕಾರನ್ ಮತ್ತು ಮುತ್ತರಸರಂತಹ ಸ್ಥಳೀಯ ಜನರೂ ಸಹ ಚರ್ಮಕ್ಕಾಗಿ ಹಾವುಗಳನ್ನು ಹಿಡಿಯುತ್ತಾರೆ. ಆದರೆ ಇವರಿಗೆ ಇರುಳರಿಗಿರುವಷ್ಟು ಕೈಚಳಕವಿಲ್ಲ. ಹಾವುಗಳ ನೈಸರ್ಗಿಕ ಇತಿಹಾಸದ ಬಗ್ಗೆ ಸ್ಪಷ್ಟ ಜ್ಞಾನವಿರುವುದರಿಂದ ಇರುಳರು ಹಾವುಗಳನ್ನು ಸುಲಭವಾಗಿ ಪತ್ತೆ ಹಚ್ಚುತ್ತಾರೆ. ಹಾವುಗಳು ಹರಿದಾಡಿದ ಜಾಡು, ಹಿಕ್ಕೆ ಮತ್ತು ಪೊರೆಗಳಿಂದ ಅವರು ಹಾವುಗಳ ವಿವಿಧ ಪ್ರಭೇದವನ್ನು ಗುರುತಿಸುತ್ತಾರೆ ; ಅವು ವಾಸಿಸುವ ಬಿಲವನ್ನು ಕಂಡು ಹಿಡಿಯುತ್ತಾರೆ ಹಾಗೂ ನಂಬಲಾಗದಷ್ಟು ಕರಾರುವಾಕ್ಕಾಗಿ ಹಾವನ್ನು ಹೊರತೆಗೆಯುತ್ತಾರೆ. ಹಾವುಗಳನ್ನು ಹೆಚ್ಚು ಬೇಟೆಯಾಡದ ಪ್ರದೇಶದಿಂದ ಒಬ್ಬ ಇರುಳ ವ್ಯಕ್ತಿ ಒಂದು ದಿನಕ್ಕೆ ಸರಾಸರಿ 2 ರಿಂದ 5 ದೊಡ್ಡ ಹಾವುಗಳನ್ನು ಹಿಡಿಯಬಲ್ಲ.

ಬಂಗಾಳದ ಯುವ ಸರ್ಪತಜ್ಞ ದೀಪಕ್ ಮಿಶ್ರ ಬರೆದಿರುವಂತೆ "ಬಂಗಾಳದಲ್ಲಿ ಹಾವುಗಳನ್ನು ಹಿಡಿಯುವ ಹಾಗೂ ಆಟ ಆಡಿಸುವವರನ್ನು 'ಷಾಪುರಿಯ' ಎಂದು ಕರೆಯುತ್ತಾರೆ. ಇವರಲ್ಲಿ ಹಿಂದು ಮತ್ತು ಮುಸಲ್ಮಾನ್, ಎರಡೂ ಧರ್ಮಗಳಿಗೂ ಸೇರಿದವರಿದ್ದಾರೆ. ಅವರೆಲ್ಲರ ಹೆಸರಿನ ಮುಂದೆ 'ಷಾಪುರಿಯ' ಎಂಬ ಮನೆತನದ ಹೆಸರಿರುತ್ತದೆ. ಒರಿಸ್ಸಾದಾದ್ಯಂತ ಅವರನ್ನು 'ಕೆರ್ಹಾ' ಎಂದು ಕರೆಯುತ್ತಾರೆ. ಒರಿಸ್ಸಾದ ಹಾವಾಡಿಗರು ಬಹುತೇಕ ಹಿಂದುಗಳು ಮತ್ತು 'ದಾಸ್' ಎಂಬುದು ಅವರ ಮನೆತನದ ಹೆಸರು. ಭುವನೇಶ್ವರದ ಸಮೀಪವಿರುವ ಪಾಟಿಯ ಹಳ್ಳಿಯಲ್ಲಿ ಇವರ ದೊಡ್ಡ ಸಮುದಾಯವೊಂದಿದೆ. ಬಂಗಾಳದಲ್ಲಿ ಹಾವು ಹಿಡಿಯುವವರು ಬಹುತೇಕ ಹಾವಾಡಿಸುವುದಕ್ಕೆ ಮತ್ತು ಚರ್ಮಕ್ಕಾಗಿ ಹಾವುಗಳನ್ನು ಹಿಡಿಯುತ್ತಾರೆ. ಹಾವುಗಳು ಸಂಪೂರ್ಣ ಸುರಕ್ಷಿತ ಹಾಗೂ ಪೋಷಕಾಂಶಗಳಿಂದ ಕೂಡಿದ ಆಹಾರವಾದರೂ ಭಾರತದಲ್ಲಿ ಅನೇಕ ಜನರು ಹಾವುಗಳನ್ನು ತಿನ್ನುವುದಿಲ್ಲ. ಆದರೂ ಸಹ ಚಕ್ಮ, ಮಿಜೊ ಮತ್ತು ಈಶಾನ್ಯ

ಭಾರತದ ಕೆಲವು ಬುಡಕಟ್ಟು ಜನರು ಕಣ್ಣಿಗೆ ಬೀಳುವ ಯಾವುದೇ ಹಾವನ್ನೂ, ಅದು ವಿಷಕಾರಿಯಾಗಲೀ ಅಥವಾ ವಿಷವಿಲ್ಲದ ಹಾವಾಗಲೀ ಕೊಂದು ತಿನ್ನುತ್ತಾರೆ.

ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಮಹಾರ್ ಜನಾಂಗದ ಜನರು ಹಾಫ್‌ಕಿನ್ ಸಂಸ್ಥೆಗೆ ಪ್ರತಿವಿಷ ಸಿದ್ಧಪಡಿಸಲು ಅಗತ್ಯವಿರುವ ಗರಗಸ ಹುರುಪೆಯ ಮಂಡಲ ಹಾವುಗಳನ್ನು ಪ್ರತಿವರ್ಷ ಸಾವಿರಾರು ಸಂಖ್ಯೆಯಲ್ಲಿ ಹಿಡಿದು ಒದಗಿಸುತ್ತಾರೆ. ಹಾವು ಹಿಡಿಯುವುದಕ್ಕೆ ಅವರು ಬಿದಿರಿನಿಂದ ತಯಾರಿಸಿದ ಇಕ್ಕಳವನ್ನು ಮತ್ತು ಕಲ್ಲುಗಳನ್ನು ಜರುಗಿಸಲು ಚೂಪು ತುದಿಯಿರುವ ಕೋಲೊಂದನ್ನು ಬಳಸುತ್ತಾರೆ. ವೇಗವಾಗಿ ನಡೆಯಬಲ್ಲ ಒಬ್ಬ ಮಹಾರ್ ಒಂದು ದಿನದಲ್ಲಿ 30 ರಿಂದ 40 ಮಂಡಲ ಹಾವುಗಳನ್ನು ಹಿಡಿಯಬಲ್ಲ. ಆತ ಬೇರೆ ಯಾವುದೇ ಪ್ರಭೇದದ ಹಾವನ್ನು ಹಿಡಿಯುವುದಿಲ್ಲ.

ಹಾವಾಡಿಗರು ಸಾಮಾನ್ಯವಾಗಿ ಹಾವುಗಳನ್ನು ತಾವೇ ಹಿಡಿಯುವುದಿಲ್ಲ. ಬದಲು ಹಾವು ಹಿಡಿಯುವ ಸ್ಥಳೀಯ ಬುಡಕಟ್ಟು ಜನಗಳಿಂದ ತಮ್ಮ ರಸ್ತೆ ಬದಿಯ ಪ್ರದರ್ಶನಕ್ಕೆ ಅವನ್ನು ಕೊಂಡುಕೊಳ್ಳುತ್ತಾರೆ. ಕೆಲವು ಹಾವಾಡಿಗರು ಕೈಚಳಕದ, ಇಂದ್ರಜಾಲದ ಒಳ್ಳೆಯ ಕಲಾವಿದರು. ಅವರಿಗೆ ಹಾವುಗಳ ಬಗ್ಗೆ ಹೆಚ್ಚಿನ ಅರಿವಿರುವುದು ಅಪರೂಪ. ಅವರು ವಿಷದ ಹಾವುಗಳ ವಿಷದಂತಗಳನ್ನು ಅಥವಾ ವಿಷವನ್ನು ಸಾಮಾನ್ಯವಾಗಿ ತೆಗೆದುಹಾಕಿರುತ್ತಾರೆ. ಹಾವಾಡಿಗರ ಹಾವು ಪ್ರದರ್ಶನದ ಸಂಪ್ರದಾಯವು ಅತ್ಯಂತ ಆಕರ್ಷಕವಾದುದು. ಆದರೆ ಈ ಕಲಾವಿದ ಹಾವಾಡಿಗರು, ತಮ್ಮ ಪ್ರದರ್ಶನದ ನಾಟಕೀಯ ಅಂಶ ಹೆಚ್ಚಲೆಂದು ಹಾವುಗಳ ಬಗ್ಗೆ ಭಯ ಹುಟ್ಟಿಸುವ ಹಲವಾರು ರಂಜಕ ಕಥೆಗಳನ್ನು ಹಬ್ಬಿಸುವುದು ದುರದೃಷ್ಟದ ಸಂಗತಿ. ಇದರಿಂದ ಭಾರತದಲ್ಲಿ ಹಾವುಗಳ ಬಗ್ಗೆ ಭಯ ಮತ್ತು ಮೌಢ್ಯ ಹೆಚ್ಚಾಗಿದೆ. ಆಗ್ರಾದ ಹೊರವಲಯದಲ್ಲಿ ಬರೀ ಹಾವಾಡಿಗರೇ ತುಂಬಿರುವ ಹಳ್ಳಿಯೊಂದಿದೆ. ಅದೇ ರೀತಿ ಒರಿಸ್ಸಾದಲ್ಲಿಯೂ ಒಂದು ಹಳ್ಳಿಯಿದೆ. ಭಾರತದ ಮಿಕ್ಕ ಪ್ರದೇಶದಲ್ಲಿ ಹಾವಾಡಿಗರು ಅಲೆಮಾರಿಗಳು. ದೊಡ್ಡ ನಗರಗಳಲ್ಲಿ ಅವರು ಬೃಹತ್ ಹೋಟೆಲುಗಳು ಹಾಗೂ ಮುಖ್ಯವಾದ ಕೇಂದ್ರ ಸ್ಥಾನಗಳ ಸಮೀಪ ತಮ್ಮದೇ ಆದ ವಸತಿಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಕೆಲವು ವೇಳೆ ಅವರು ವಿಷದ ಹಾವುಗಳ ಕಡಿತ ಹಾಗೂ ಚೇಳು ಚುಚ್ಚಿಗೆ ಔಷಧೋಪಚಾರದ ವಸ್ತುಗಳನ್ನು ಮಾರುವುದೂ ಉಂಟು. ಮತ್ತೊಂದು ರೀತಿಯ ಹಾವಾಡಿಗರು ಮನೆಗಳಿಗೆ ಭೇಟಿ ನೀಡುತ್ತಾರೆ ಮತ್ತು ಮನೆ ಮುಂದಿರುವ ತೋಟದಲ್ಲಿ ಹಾವುಗಳಿರುವ ಸಾಧ್ಯತೆ ಹೆಚ್ಚಿದ್ದಂತೆ ಕಾಣುತ್ತದೆ ಎಂದು ಹೇಳುತ್ತಾರೆ. ಮನೆಯೊಡೆಯ ಹಾವಾಡಿಗನ ಮಾತಿಗೆ ಹೆದರಿ ತೋಟವನ್ನು ಪರೀಕ್ಷಿಸಿ ಹಾವುಗಳನ್ನು ತೆಗೆದುಹಾಕಲು ಹಣಕೊಡುವುದಾಗಿ ಒಪ್ಪುತ್ತಾನೆ. ಆಗ ಹಾವಾಡಿಗ ಪುಂಗಿ ಊದುತ್ತಾ, ಪೊದೆಗಳ ನಡುವೆ ತಿರುಗುತ್ತಾ ಅರ್ಧಗಂಟೆಯೊಳಗೆ 50ಕ್ಕಿಂತ ಹೆಚ್ಚು ಹಾವುಗಳನ್ನು ತೆಗೆದು ಹಾಕುತ್ತಾನೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಹಾವುಗಳು ಹಾವಾಡಿಗನೇ ತಂದಿದ್ದ ಹಾವುಗಳೆಂದು ಗೊತ್ತಾದೀತು.

ಹಾವುಗಳ ಹಬ್ಬ ನಾಗರಪಂಚಮಿ ಆಗಸ್ಟ್ ತಿಂಗಳ ಸುಮಾರಿಗೆ ಬರುತ್ತದೆ. ಅಂದು ದೇವಸ್ಥಾನಗಳಲ್ಲಿ ನಾಗರಕಲ್ಲುಗಳಿಗೆ ಹಾಗೂ ನಾಗರಹಾವಿನ ವಾಸಸ್ಥಳವಾದ ಕೆಲವು

ಹುತ್ತಗಳಿಗೆ ಪೂಜೆ ಮಾಡುವ ಮೂಲಕ ಬಹುತೇಕ ಹಿಂದುಗಳು ಹಬ್ಬವನ್ನು ಆಚರಿಸುತ್ತಾರೆ. ಆದರೆ ಮಹಾರಾಷ್ಟ್ರದ ಬತ್ತೀಸ್ ಶಿರಾಲದ ರೈತರು ಈ ಹಬ್ಬವನ್ನು ಆಚರಿಸುವ ರೀತಿಯೇ ಬೇರೆ. ಅನೇಕ ವರ್ಷಗಳ ಹಿಂದೆ ಒಬ್ಬ ಗುರು ಇವರಿಗೆ ಹಾವಿನ ಕಡಿತದಿಂದ ರಕ್ಷಣೆ ನೀಡಿದ್ದ ಎಂಬ ಕಥೆ ಇದೆ. ಆದ್ದರಿಂದ ರೈತರು ಪ್ರತಿವರ್ಷ ಕೇರೆ ಹಾವು ಹಾಗೂ ಪಟ್ಟೆ ರೇಸರ್‌ಗಳ ಜೊತೆಗೆ ನೂರಾರು ನಾಗರ ಹಾವುಗಳನ್ನು ಹಿಡಿದು ಅವುಗಳಿಗೆ ಪೂಜೆ ಸಲ್ಲಿಸುತ್ತಾರೆ. ಹಬ್ಬದ ಎರಡೂ ದಿನಗಳಲ್ಲಿ ಹಾವುಗಳನ್ನು ಗಡಿಗೆಗಳಲ್ಲಿಡುತ್ತಾರೆ ಮತ್ತು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ. ಹಬ್ಬದ ನಂತರ ಹಾವುಗಳಿಗೆ ಯಾವುದೇ ತೊಂದರೆ ಮಾಡದೆ ಬಿಟ್ಟುಬಿಡುತ್ತಾರೆ. ತಮಗೆ ಹಾವುಗಳ ಕಚ್ಚುವಿಕೆಯಿಂದ ರಕ್ಷಣೆಯಿದೆ ಎಂದು ನಂಬಿರುವ ಈ ಹಳ್ಳಿಯ ರೈತರು, ಹಾವುಗಳನ್ನು ಹಿಡಿಯುವಾಗ ತೋರಿಸುವ ಕೈಚಳಕ ಹಾಗೂ ಆತ್ಮವಿಶ್ವಾಸವನ್ನು ನೋಡುವುದೇ ಒಂದು ದೊಡ್ಡ ಪಾಠ.

ಭಾರತದಾದ್ಯಂತ ನಾಗದೇವಾಲಯಗಳಿವೆ. ಅವುಗಳಲ್ಲಿ ಜೀವಂತ ಹಾವುಗಳನ್ನು ಕಾಣುವುದು ಅಪರೂಪವಾದರೂ ಅನೇಕ ನಾಗರ ಕಲ್ಲುಗಳನ್ನು ನೋಡಬಹುದು. ಕೆಲವು 'ಸ್ವಾಮೀಜಿ'ಗಳು ಪೂಜೆಯ ನಾಟಕ ಮಾಡಲು ಒಂದು ಅಥವಾ ಎರಡು ನಾಗರಹಾವುಗಳನ್ನು ಇಟ್ಟುಕೊಂಡಿರುತ್ತಾರೆ. ಆದರೆ ಮಲೇಷಿಯಾದ ಪೆನಾಂಗ್‌ನಲ್ಲಿ ಕುಳಿಮಂಡಲ ಹಾವುಗಳಿಂದ ತುಂಬಿರುವ ದೇವಸ್ಥಾನವಿರುವಂತೆ ಭಾರತದಲ್ಲಿ ದೇವಸ್ಥಾನಗಳಿಲ್ಲ.

### ಹಾವುಗಳ ಸಂರಕ್ಷಣೆ :

ಹಾವುಗಳನ್ನು ರೈತರ 'ಉತ್ಕೃಷ್ಟ ಗೆಳೆಯರೆಂದೇ' ಕರೆಯಬೇಕು. ಇಲಿಗಳನ್ನು ಹಿಂಬಾಲಿಸಿ, ಅವು ವಾಸಿಸುವ ಬಿಲಗಳಿಗೆ ನುಗ್ಗಿ ಹಿಡಿಯಲು ಯುಕ್ತವಾದ ಜೀವಿಗಳಲ್ಲಿ ಹಾವುಗಳನ್ನು ಬಿಟ್ಟರೆ ಬೇರೆ ಜೀವಿಗಳಿಲ್ಲ. ವಾಸ್ತವವಾಗಿ ಇಲಿಗಳಿಂದುಂಟಾಗುವ ನಷ್ಟದ ಬಗ್ಗೆ ಜನರಿಗೆ ಸರಿಯಾದ ಮಾಹಿತಿಯೇ ಗೊತ್ತಿಲ್ಲ. ಡಾ.ಸಲಿಮ್ ಅಲಿಯವರು ದಂಶಕಗಳನ್ನು ನಾಶಪಡಿಸುವ ಪಕ್ಷಿಗಳ ಪ್ರಾಮುಖ್ಯತೆಯನ್ನು ವಿವರಿಸುವಾಗ, ಭಾರತದಲ್ಲಿ ಧಾನ್ಯಗಳ ಉತ್ಪಾದನೆಯಲ್ಲಿ ಶೇಕಡಾ 20-25ರಷ್ಟು ಇಲಿಗಳಿಂದ ನಾಶವಾಗುತ್ತಿದೆಯೆಂದು ಉಲ್ಲೇಖಿಸಿದ್ದಾರೆ. ಇಲಿಗಳಿಂದಾಗುವ ಇತರೆ ನಷ್ಟವಂತೂ ಅಗಣಿತವಾದುದು. ನೀಲಗಿರಿಯಲ್ಲಿರುವ ಒಂದು ಟೀ ತೋಟದಲ್ಲಿ ಪ್ರತಿ ವರ್ಷ ಇಲಿಗಳಿಂದ ಐದು ಲಕ್ಷ ರೂಪಾಯಿಗಳಷ್ಟು ನಷ್ಟ ಉಂಟಾಗುತ್ತಿದೆಯೆಂದು ವರದಿಯಾಗಿದೆ (ಈ ಟೀ ತೋಟದ ಸುತ್ತ ಇದ್ದ ಅರಣ್ಯವನ್ನು ನಾಶಮಾಡಿರುವುದರಿಂದ ಇಲಿಗಳ ಭಕ್ಷಕರಾದ ಹಾವು ಮತ್ತು ಪಕ್ಷಿಗಳೂ ನಾಶವಾಗಿವೆ). ಹಾವುಗಳು ದಂಶಕಗಳ ಸಂತತಿಯನ್ನು ನಿಯಂತ್ರಿಸುವಷ್ಟು ಇಲಿಯ ಪಾಶಾಣವಾಗಲಿ, ಬೋನುಗಳಾಗಲಿ ಅಥವಾ ಇತರೆ ಇಲಿ ಭಕ್ಷಕ ಪ್ರಾಣಿಗಳಾಗಲಿ ಪರಿಣಾಮಕಾರಿಯಲ್ಲ.

ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ನಿರುಪದ್ರವಿ ಹಾವುಗಳಿಂದ ಅಪಾಯಕಾರಿಯಾದ ಕೆಲವೇ ಹಾವುಗಳನ್ನು ಗುರುತಿಸುವ ಅರಿವಿದ್ದಲ್ಲಿ ಜನರು ಹಾವುಗಳ ಭಯದಿಂದ

ಮುಕ್ತರಾಗುತ್ತಾರೆ. ಅನೇಕ ಪ್ರದೇಶಗಳಲ್ಲಿ ಜನರು ಕೇರೆ ಹಾವನ್ನು ಗುರುತಿಸುತ್ತಾರೆ ಮತ್ತು ಇಲಿಗಳನ್ನು ನಾಶಪಡಿಸುವಲ್ಲಿ ಕೇರೆ ಹಾವಿನ ಪಾತ್ರವನ್ನೂ ಅರಿತಿದ್ದಾರೆ. ಆದ್ದರಿಂದ ಕೇರೆ ಹಾವುಗಳಿಗೆ ಯಾರೂ ತೊಂದರೆ ಮಾಡುವುದಿಲ್ಲ. ಈ ತಿಳುವಳಿಕೆಯಿದ್ದರೂ ಚರ್ಮಕ್ಕಾಗಿ ಕೊಲ್ಲಲಾಗುತ್ತಿರುವ ಪ್ರಭೇದಗಳಲ್ಲಿ ಕೇರೆ ಹಾವು ಪ್ರಮುಖವಾಗಿರುವುದನ್ನು ತಡೆಯಲು ಸಾಧ್ಯವಾಗಿಲ್ಲದಿರುವುದು ದುರದೃಷ್ಟಕರ. ಆಹಾರದ ಉತ್ಪಾದನೆಯನ್ನು ಹೆಚ್ಚಿಸಲು ನಾವು ಹಾಕಿಕೊಂಡಿರುವ ಬೃಹತ್ತಾದ ಹಾಗೂ ಅಪಾರ ಆರ್ಥಿಕ ವ್ಯಯದ ಪ್ರಯತ್ನಗಳು ಕೇರೆ ಹಾವುಗಳ ಸಾಮೂಹಿಕ ನಾಶದಿಂದ ಮಣ್ಣುಪಾಲಾಗುವಂತೆ ಕಾಣುತ್ತದೆ. ಒಂದು ಕೇರೆ ಹಾವು ಪ್ರತಿವರ್ಷ ನೂರಾರು ಇಲಿ ಹಾಗೂ ಸುಂಡಿಲಿಗಳನ್ನು ಕೊಂದು ತಿನ್ನುತ್ತದೆ!

ಅತ್ಯಂತ ಅಪ್ರಾಮುಖ್ಯವಾದ ಹಾವಿಗೂ ನೈಸರ್ಗಿಕ ಪರಿಸರವನ್ನು ಕಾಪಾಡುವಲ್ಲಿ ಪ್ರಮುಖವಾದ ನೆಲೆ ಹಾಗೂ ಪಾತ್ರವಿದೆ. ನಿಸರ್ಗದಲ್ಲಿ ಜೀವಿ ಸಮುದಾಯಗಳ ನಡುವೆ ಇರುವ ಪ್ರತಿಯೊಂದು ಪರಿಸರ ಸಂಬಂಧಗಳ ವಿವರಗಳನ್ನು ಈ ಪುಸ್ತಕದಲ್ಲಿ ತಿಳಿಸುವುದಕ್ಕಾಗುವುದಿಲ್ಲ. ಆದರೆ ನಿಸರ್ಗದಲ್ಲಿ ವಾಸ್ತವವಾಗಿ ಪ್ರತಿಯೊಂದು ಹಾವಿನ ಪೂರ್ಣ ಪ್ರಾಮುಖ್ಯತೆಯನ್ನು ಯಾರೂ ಸರಿಯಾಗಿ ಅರಿತಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಹಾವುಗಳ ನೈಸರ್ಗಿಕ ಇತಿಹಾಸದ ರಹಸ್ಯವನ್ನು ಭೇದಿಸಲು ಮತ್ತಷ್ಟು ಕಾಲ ಹಾಗೂ ಪ್ರಯತ್ನ ಬೇಕಾಗಿದೆ. ಪರಿಣತ ಪ್ರಾಣಿಶಾಸ್ತ್ರಜ್ಞರು ಬುಡಕಟ್ಟು ಜನರ ಸಹಾಯದಿಂದ ಅತ್ಯಂತ ಸುಲಭವಾಗಿ ಈ ಪ್ರಯತ್ನದಲ್ಲಿ ಯಶಸ್ಸು ಕಾಣಬಹುದು. ಹಾವುಗಳ ಬಗ್ಗೆ ಸಾಮಾನ್ಯವಾಗಿರುವ ವಿನಾಶಕಾರಿ ಹಾಗೂ ತಪ್ಪು ನಿಲುವುಗಳನ್ನು ಬದಲಾಯಿಸುವಲ್ಲಿ, ಈ ಪ್ರಾಣಿಗಳ ಸ್ವಭಾವ ಹಾಗೂ ನಿಸರ್ಗದಲ್ಲಿ ಅವುಗಳ ಪಾತ್ರವನ್ನು ಅರಿಯುವುದು ಮೊದಲ ಹೆಜ್ಜೆಯಾಗುತ್ತದೆ.

*ಅತಿ ಹೆಚ್ಚು ಮಾರಾಟವಾದ ವರ್ಷದಲ್ಲಿ ನಡೆದ ಹಾವಿನ ಚರ್ಮದ ರಫ್ತು :*

| ಮಾರ್ಚ್ 1968 | | ಏಪ್ರಿಲ್ 1967ರಿಂದ ಮಾರ್ಚ್ 1968 ರವರೆಗೆ | |
|---|---|---|---|
| ಪ್ರಮಾಣ | ಮೌಲ್ಯ | ಪ್ರಮಾಣ | ಮೌಲ್ಯ |
| 17,522 ಕಿ. ಗ್ರಾಂ. | ರೂ.7,175,116 | 358,413ಕಿ.ಗ್ರಾಂ. | ರೂ.107,651,889 |

ಒಂದು ಹಾವಿನ ಚರ್ಮಕ್ಕೆ ಅಂದಾಜು ರೂ.10ರಂತೆ ಲೆಕ್ಕ ಹಾಕಿದರೂ ಚರ್ಮದ ಉದ್ಯಮಕ್ಕೆಂದೇ ಒಂದು ವರ್ಷದಲ್ಲಿ (1967-1968) ಸುಮಾರು ಒಂದು ಕೋಟಿ ಕೇರೆ ಹಾವು, ನಾಗರ ಹಾವು, ಹೆಬ್ಬಾವು ಹಾಗೂ ಇತರೆ ಹಾವುಗಳನ್ನು ಕೊಲ್ಲಲಾಗಿದೆ. ಹಾವಿನ ಚರ್ಮದ ಉದ್ಯಮ, ಬುಡಕಟ್ಟು ಜನರಿಗೆ ಉದ್ಯೋಗವನ್ನು ಒದಗಿಸುತ್ತದೆ. ಆದರೆ ಇಂದು ಹಾವುಗಳನ್ನು ಕೊಲ್ಲುವ ಸಂಖ್ಯೆ ಹಾಗೂ ಕಾಲದ ಮೇಲೆ ನಿಯಂತ್ರಣವಿಲ್ಲ. ಅಲ್ಲದೆ ಮಧ್ಯವರ್ತಿ ಜನರೇ ಹೆಚ್ಚು ಲಾಭ ಪಡೆಯುತ್ತಾರೆ. ಆದ್ದರಿಂದ ಚರ್ಮ ಉದ್ಯಮವು ಪರಿಸರದ ಹಾಗೂ ಆರ್ಥಿಕ ದೃಷ್ಟಿಯಿಂದ ಅನರ್ಥಕಾರಿ ಯಾದುದು. ವೈಜ್ಞಾನಿಕ ನಿರ್ವಹಣೆ ಮತ್ತು ಸಲಹೆಯಿಂದ ನಡೆಯುವ ಬುಡಕಟ್ಟು (ಹಾವು ಹಿಡಿಯುವವರ) ಜನರ ಸಹಕಾರ ಸಂಘವು ಭಾರತದಲ್ಲಿ ಹಾವಿನ ಚರ್ಮ ಅಥವಾ ಹಾವಿನ ವಿಷದ ಉದ್ಯಮವನ್ನು ನಡೆಸಿದಾಗ ಮಾತ್ರ ನಾವು ಹಾವಿನ



ವಿಷದ ಹಾವನ್ನು ಚೀಲದಲ್ಲಿ ಸಂಗ್ರಹಿಸುವ ವಿಧಾನ



ವಿಷರಹಿತ ಹಾವನ್ನು ಹಿಡಿಯುವ ವಿಧಾನ

ಚರ್ಮೋದ್ಯಮವನ್ನು ಸಮರ್ಥಿಸಬಹುದು. ಈ ಉದ್ಯಮದಿಂದಾಗುವ ಲಾಭವನ್ನು, ದಂಶಕಗಳನ್ನು ನಾಶಪಡಿಸುವ ಹಾವುಗಳ ಮೌಲ್ಯದ ಜತೆಗೆ ತುಲನೆ ಮಾಡಲೇಬೇಕು. ಈ ಉದ್ಯಮದಲ್ಲಿ ಹಾವಿನ ಚರ್ಮವನ್ನು ಮಾತ್ರ ತೆಗೆದುಕೊಂಡು ಉಳಿದದ್ದೆಲ್ಲವನ್ನೂ ಬಿಸಾಡುವುದರಿಂದ ಈ ವಿಷಯವನ್ನು ತೀವ್ರವಾಗಿ ಪರಿಗಣಿಸಬೇಕು. ಬಹುಶಃ ಬುಡಕಟ್ಟು ಜನರ ಸಹಕಾರ ಸಂಘವು ಹಾವುಗಳ ಮಾಂಸವನ್ನು ಮೊಸಳೆಗಳಿಗೆ ಆಹಾರವಾಗಿ ನೀಡಬಹುದು. ಈ ಮೊಸಳೆಗಳ ಸಾಕಾಣಿಕೆಯನ್ನು ಸಹಕಾರ ಸಂಘ ನೋಡಿಕೊಳ್ಳಬೇಕು!

## ಇತ್ತೀಚಿನ ವನ್ಯಜೀವಿ ಹಾಗೂ ರಫ್ತು ಕಾನೂನುಗಳು:

ಭಾರತದ ಅನೇಕ ರಾಜ್ಯಗಳಲ್ಲಿ ಜಾರಿಯಲ್ಲಿರುವ ವನ್ಯಜೀವಿ (ರಕ್ಷಣೆ) ಕಾಯಿದೆಯು (1972) ಕೇವಲ ಭಾರತದ ಶಿಲಾ ಹೆಬ್ಬಾವಿಗೆ ರಕ್ಷಣೆ ನೀಡುತ್ತದೆ. ಈ ಪ್ರಭೇದಕ್ಕೂ ಪೂರ್ಣವಾದ ರಕ್ಷಣೆ ನೀಡಲಾಗಿಲ್ಲ. ರಾಜ್ಯದ ಮುಖ್ಯ ವನ್ಯಜೀವಿ ಪಾಲಕರು ಈ ಹಾವಿನ ಚರ್ಮ ಗಳಿಸಿ ಮಾರಾಟ ಮಾಡಲು ಪರವಾನಗಿಯನ್ನು ನೀಡಬಹುದು. ಹಾವುಗಳಿಗೆ ಭಾರತದ ವನ್ಯಜೀವಿ ವಸ್ತುಗಳ ರಫ್ತುನೀತಿ (1975-76) ಇನ್ನೂ ಹೆಚ್ಚು ರಕ್ಷಣೆ ನೀಡುವ ಕಾಯಿದೆಯಾಗಿದೆ. ಈ ಕಾಯಿದೆಯ ಪ್ರಕಾರ ಎಲ್ಲ ಹಾವುಗಳ ಅಥವಾ ಅವುಗಳ ವಸ್ತುಗಳ (ವಿಷ, ಚರ್ಮ ಇತ್ಯಾದಿ) ರಫ್ತಿಗೆ ಸಾಮಾನ್ಯವಾಗಿ ಪರವಾನಗಿಯಿಲ್ಲ. ವೈಜ್ಞಾನಿಕ ಸಂಶೋಧನೆಯ ಕಾರಣಗಳಿಗಾಗಿ ಮಾತ್ರ ರಫ್ತು ಮಾಡಲು ವಿಶೇಷ ಪರವಾನಗಿ ನೀಡಲಾಗುತ್ತದೆ. ಹಾವುಗಳ ವಾಸಸ್ಥಾನದ ನಾಶದಿಂದ ಒತ್ತಡಕ್ಕೊಳಗಾಗುತ್ತಿರುವ ಕಾಳಿಂಗಸರ್ಪ ಹಾಗೂ ಮಳೆಕಾಡುಗಳ ಕೆಲವು ಪ್ರಭೇದಗಳನ್ನು ರಕ್ಷಿಸುವ ಉದ್ದೇಶದಿಂದ ಅವು ವಾಸಿಸುವ ಸ್ಥಳಗಳನ್ನು ರಕ್ಷಿಸಬೇಕೆಂದು ಸರ್ಕಾರಕ್ಕೆ ಸಲಹೆ ನೀಡಲಾಗಿದೆ.

## ಹಾವುಗಳ ಅಧ್ಯಯನ ಮತ್ತು ಸಂಗ್ರಹಣೆ :

ಕೈಕಾಲುಗಳಿಲ್ಲದ ಕುತೂಹಲಕಾರಿ ಜೀವಿಗಳಾದ ಹಾವುಗಳ ಬಗ್ಗೆ ನಿಮಗೆ ಬಹುಶಃ ಹೆಚ್ಚಿನ ಆಸಕ್ತಿಯಿರಬಹುದು. 'ಅಜ್ಞಾನವೇ ಭಯದ ಮೂಲ'ವೆಂಬ ಸೂಕ್ತಿ ನಿಜ. ಹಾವುಗಳ ಬಗ್ಗೆ ನೀವು ಹೆಚ್ಚೆಚ್ಚು ಅಧ್ಯಯನ ಮಾಡಿದಂತೆ ಅದನ್ನು ಅರ್ಥಮಾಡಿಕೊಳ್ಳುವುದು ಸುಲಭ. ಹಾಗೆಯೇ ಅವನ್ನು ಪ್ರೀತಿಸುವುದೂ ಹೆಚ್ಚಾಗುತ್ತದೆ. ಒಂದು ವೇಳೆ ನೀವು ಹಾವುಗಳನ್ನು (ಶಾಲೆ ಅಥವಾ ಕಾಲೇಜಿನ ಯೋಜನೆಯಾಗಿ ಅಥವಾ ನೀವೇ ಸ್ವಂತವಾಗಿ) ಅಧ್ಯಯನ ಮಾಡಲು ತೀರ್ಮಾನಿಸಿದರೆ ಕೇವಲ ನಾಗರ ಹಾವುಗಳನ್ನು ಹಿಡಿಯುವ ಹಾಗೂ ಮಂಡಲ ಹಾವುಗಳಿಗೆ ಮುಗಿಬೀಳುವ ಯೋಜನೆ ಹಾಕಬಾರದು. ವಿಷರಹಿತ ಹಾವುಗಳನ್ನು ಹಿಡಿದಾಡುವಾಗ ಮೊದಲಿಗೆ ಆ ಹಾವು ವಿಷವಲ್ಲದ ಹಾವೋ ಅಲ್ಲವೋ ಎಂಬುದನ್ನು ಸುಸ್ಪಷ್ಟವಾಗಿ ತಿಳಿದುಕೊಳ್ಳುವುದನ್ನು ಕಲಿಯಬೇಕು. ವಿಷದ ಹಾವುಗಳನ್ನು ಕೈಯಲ್ಲಿ ಹಿಡಿಯಲೂಬಾರದು ಹಾಗೂ

ಮನೆಯಲ್ಲಿ ಇಟ್ಟುಕೊಳ್ಳಲೂಬಾರದು. ಏಕೆಂದರೆ ಅದರಿಂದ ಅನಿರೀಕ್ಷಿತ ಅಪಾಯದ ಸಾಧ್ಯತೆ ಹೆಚ್ಚು.

ಹಾವುಗಳನ್ನು ಕಂಡುಹಿಡಿಯುವುದು ಮೊದಲಿಗೆ ಕಷ್ಟದ ಕೆಲಸ. ಆದರೆ ನೀವು ನಗರದ ಹೊರವಲಯದಲ್ಲಿ ಅಥವಾ ತೋಟಗಳಿರುವ ಸ್ಥಳದಲ್ಲಿ ವಾಸಿಸುತ್ತಿದ್ದರೆ, ನಿಮಗೆ ಜೀವಂತವಿರುವ ಹಾವುಗಳ ಬಗ್ಗೆ ಆಸಕ್ತಿಯಿದೆ ಎಂಬ ವಿಷಯ ಜನರಿಗೆ ತಲುಪುವಂತೆ ಮಾಡಿದರೆ ಸಾಕು. ಬಾವಿ, ಹುಲ್ಲಿನ ಬಣವೆಗಳು ಅಥವಾ ಸೂರಿನ ತೆಂಗಿನ ಸೋಗೆಗಳ ನಡುವೆಯಿಂದ ಹಾವನ್ನು ತೆಗೆದುಹಾಕಲು ಜನ ನಿಮ್ಮನ್ನು ಕರೆಯಲು ಪ್ರಾರಂಭಿಸುತ್ತಾರೆ. ಅನುಭವಿಯಾಗುತ್ತಿದ್ದಂತೆ ನಿಮಗೆ ಹಾವು ಹಿಡಿಯಲು ಸಾಧ್ಯತೆಯಿರುವ ಸ್ಥಳಗಳ ಬಗ್ಗೆ ಗೊತ್ತಾಗುತ್ತದೆ. ಬೇಸಗೆ ಕಾಲದ ಶುಷ್ಕ ದಿನಗಳಾದರೆ ತಂಪಾದ ಹಾಗೂ ತೇವಾಂಶವಿರುವ ಸ್ಥಳಗಳಲ್ಲಿ ನೋಡಬೇಕು. ನಾಗರಹಾವುಗಳು ಇಲಿಯ ಬಿಲಗಳಲ್ಲಿ ಜೀವಿಸಬಹುದು. ಕಡಂಬಳಗಳು ಇಟ್ಟಿಗೆಗೂಡುಗಳನ್ನು ಇಷ್ಟಪಡುತ್ತವೆ. ಮರದ ಹಾವುಗಳು ಕೆಲವು ಜಾತಿಯ ವೃಕ್ಷಗಳನ್ನು ಮತ್ತು ಪೊದೆಗಳನ್ನು ಇಷ್ಟಪಡುತ್ತವೆ ಮತ್ತು ನೀರುಹಾವುಗಳನ್ನು ರಾತ್ರಿಯ ವೇಳೆ ಬ್ಯಾಟರಿ ಬೆಳಕಿನ ಸಹಾಯದಿಂದ ಸುಲಭವಾಗಿ ಹಿಡಿಯಬಹುದು. ಈ ತರಹದ ವಿಷಯಗಳನ್ನು ಅನುಭವದಿಂದ ಹಾಗೂ ಇರುಳರಂತಹ ಹಾವು ಹಿಡಿಯುವ ಬುಡಕಟ್ಟು ಜನರ ಸಹಾಯದಿಂದ ಪ್ರತಿಯೊಬ್ಬರೂ ಕಲಿಯಬಹುದು. ಅರಣ್ಯಗಳಲ್ಲಿ ಇನ್ನೂ ಹೆಚ್ಚಿನ ರೀತಿಯ ಹಾವುಗಳು ಜೀವಿಸುತ್ತವಾದರೂ ಅವನ್ನು ನೋಡುವುದು ಕಷ್ಟದ ವಿಷಯ. ಹುಲ್ಲುಪೊದೆಗಳ ಬದುಗಳಿರುವ ಭತ್ತದ ಗದ್ದೆಗಳಲ್ಲಿ ಹಾವುಗಳನ್ನು ಸುಲಭವಾಗಿ ನೋಡಬಹುದು. ಕೃಷಿ ಭೂಮಿಯಲ್ಲಿ ಇಲಿ ಹಾಗೂ ಸುಂಡಿಲಿಗಳು ಅಪಾರವಾಗಿರುತ್ತವೆ. ಉಳುವಾಗ ನೇಗಿಲಿನಿಂದ ತಪ್ಪಿಸಿಕೊಂಡ ಹಾವುಗಳು ಗದ್ದೆಬದುಗಳಲ್ಲಿ, ಹಾಗೂ ಪೊದೆಗಳಲ್ಲಿ ಸೇರಿಕೊಂಡಿರುತ್ತವೆ.

ಹಗಲು ಮತ್ತು ರಾತ್ರಿಯ ವಿವಿಧ ವೇಳೆಯಲ್ಲಿ ಹಾವುಗಳು ಚಟುವಟಿಕೆ ಯಿಂದಿರುವುದರಿಂದ, ಸರ್ಪವೀಕ್ಷಣೆಯ ತೀವ್ರ ಆಸಕ್ತಿಯಿರುವವರು ವಿವಿಧ ಋತುಗಳಲ್ಲಿ ಬೆಳಿಗ್ಗೆ, ಮಧ್ಯಾಹ್ನ ಹಾಗೂ ರಾತ್ರಿಯ ಸಮಯಗಳಲ್ಲಿ ಯಾವುದಾದರೊಂದು ಪ್ರದೇಶದ ಸುತ್ತ ತಿರುಗಾಡುತ್ತಾರೆ. ಮೊದಲಿಗೆ ಇದರಿಂದ ಪ್ರಯೋಜನವಿಲ್ಲವೆಂದು ಅನಿಸಬಹುದು. ಆದರೆ ತಾಳ್ಮೆ ಹಾಗೂ ಸೂಕ್ಷ್ಮವಾದ ವೀಕ್ಷಣೆಯಿಂದ ಯಾರೂ ಸರ್ಪಗಳ ಅಧ್ಯಯನ ಮಾಡಬಹುದು, ಸರ್ಪತಜ್ಞನಾಗಬಹುದು. ಅನಂತರ ಹಾವಿನ ಪೊರೆ, ಮಲ ಮತ್ತು ಹಾವು ಹರಿದಾಡಿದ ಜಾಡು ಮುಂತಾದ ಸಂಕೇತಗಳಿಂದಲೇ ನಿಮ್ಮ ಗುರಿಯನ್ನು ಹುಡುಕಬಲ್ಲಿರಿ. ಪರಭಕ್ಷಕ ಜೀವಿಯೊಂದು ಈಡುಜೀವಿಯ ಜಾಡುಹಿಡಿಯುವಂತೆಯೇ. ಹಾವುಗಳನ್ನು ಚೀಲದಲ್ಲಿ ಹಾಕುವುದು ಮೊದಲಿಗೆ ಕಷ್ಟವಾಗಬಹುದು. ಆದರೆ ಅನುಭವವೇ ಪರಮ ಗುರು. ಬಿಲವೊಂದರಲ್ಲಿ ಹಾವಿರುವುದು ಖಚಿತವಿದ್ದಲ್ಲಿ, ಒಂದು ತೆಳುವಾದ ಹಾಗೂ ಬಾಗುವ ಕಡ್ಡಿಯನ್ನು ಆದಷ್ಟು ಬಿಲದ ಒಳಕ್ಕೆ ಹಾವಿನ ಶರೀರ ಮುಟ್ಟುವವರೆಗೆ ತಳ್ಳಿ. ಕಡ್ಡಿಯು ಹಾವನ್ನು ಮುಟ್ಟಿದಾಗ, ಅದು ಚಲಿಸುತ್ತದೆ. ಆಗ

ಕಡ್ಡಿಯೂ ಅಲುಗಾಡಲು ಪ್ರಾರಂಭಿಸುತ್ತದೆ. ಇದರಿಂದ ಹಾವು ಎಷ್ಟು ಆಳದಲ್ಲಿದೆ ಎಂದು ಗೊತ್ತಾಗುತ್ತದೆ. ರಕ್ಷಣೆ ಪಡೆಯಲು ಹುತ್ತ ಹೊಕ್ಕಾಗ ಹಾವುಗಳು ತೀರ ಆಳಕ್ಕೆ ಹೋಗಬಹುದು. ಆದರೆ ಬಿಲಗಳಲ್ಲಿ ಹೆಚ್ಚಾಗಿ ಕೇವಲ ಎರಡು ಅಥವಾ ಮೂರು ಅಡಿಗಳಷ್ಟು ಮಾತ್ರ ಒಳಕ್ಕೆ ಹೋಗಿರುತ್ತವೆ. ಜಾಗರೂಕತೆಯಿಂದ ಅಲ್ಪ ಪ್ರಯತ್ನದಿಂದಲೇ ಬಿಲ ಅಗೆದು ಹಾವನ್ನು ಹೊರತೆಗೆಯಬಹುದು. ಆದರೆ ನೀವು ಅಗೆಯುವಾಗ ಹಾವನ್ನು ಕತ್ತರಿಸಬೇಡಿ!

ಬಟ್ಟೆ ಚೀಲಗಳಲ್ಲಿ ಹಾವುಗಳನ್ನು ಒಂದು ದಿನದ ಮಟ್ಟಿಗೆ ಇಡಬಹುದು. ಚೀಲದೊಳಕ್ಕೆ ಕೆಲವು ಹಸಿರು ಎಲೆಗಳನ್ನು ಹಾಕಿ ಚೀಲವನ್ನು ಬಿಸಿಲಿನಿಂದ ದೂರವಿಡಿ. ವಿಷದ ಹಾವುಗಳನ್ನು ಎಂದಿಗೂ ಇಡಬೇಡಿ. ನಿಮಗೆ ಹಾವನ್ನು ದೀರ್ಘಕಾಲ ಇಟ್ಟುಕೊಳ್ಳುವ ಆಸೆಯಿದ್ದಲ್ಲಿ ಮರಳ ಹೆಬ್ಬಾವು, ಪಟ್ಟೆ ಬೆನ್ನೇಣು ಹಾವು ಅಥವಾ ಟ್ರಿಂಕೆಟ್ ಹಾವುಗಳಂತಹ ಹೆಚ್ಚು ಹೆದರದ ಪ್ರಭೇದಗಳಲ್ಲಿ ಒಂದನ್ನು ಆಯ್ಕೆಮಾಡಿಕೊಳ್ಳಿ. ಚಿಕ್ಕ ಹಾವುಗಳನ್ನು ಮಾರ್ಪಡಿಸಿ ಅಕ್ವೇರಿಯಂ ಅಥವಾ ವಿಶೇಷವಾಗಿ ಸಿದ್ಧಗೊಳಿಸಿದ ಬೋನಿನಲ್ಲಿಟ್ಟು ಸಾಕಬಹುದು. ನೀವು ನೀರು, ಎಲೆಗಳು, ಮರಳು ಮತ್ತು ಕಲ್ಲುಗಳನ್ನು ಬಹುಶಃ ಓಡಾಡಲು ಒಂದು ರೆಂಬೆಯನ್ನು ಒದಗಿಸಬೇಕು. ಹಾವಿಗೆ ಪ್ರತಿದಿನ ಬೆಳಗಿನ ಹೊತ್ತು ಅರ್ಧಗಂಟೆಯಷ್ಟಾದರೂ ಬಿಸಿಲೊದಗಿಸಬೇಕು.

ಬೋನನ್ನು ಚೊಕ್ಕಟವಾಗಿ ಒಣಗಿರುವಂತೆ ನೋಡಿಕೊಳ್ಳಬೇಕು. ಹಾವುಗಳಿಗೆ ತಂತಿಬಲೆಗೆ ತಮ್ಮ ಮೂಗನ್ನು ಉಜ್ಜುವ ಅಭ್ಯಾಸವಿದೆ. ಆದ್ದರಿಂದ ಬೋನುಗಳಿಗೆ ರಂಧ್ರಗಳಿರುವ ಅಲ್ಯೂಮಿನಿಯಂ ತಗಡು ಇರುವುದು ಒಳ್ಳೆಯದು. ಹಾವುಗಳನ್ನು ಜೀವಂತ ಸಾಕುವುದು ಒಂದು ದೊಡ್ಡ ಜವಾಬ್ದಾರಿ. ಗಾಯಗೊಂಡಿರುವ ಅಥವಾ ಸದಾ ತಪ್ಪಿಸಿಕೊಳ್ಳಲೆತ್ನಿಸುವ ಹಾವನ್ನು ಸುಮ್ಮನೆ ಬಿಟ್ಟುಬಿಡುವುದೊಳಿತು.

ಅಮೆರಿಕಾ ಹಾಗೂ ಯುರೋಪಿನಲ್ಲಿ ಹಾವುಗಳನ್ನು ಸಾಕುಪ್ರಾಣಿಗಳನ್ನಾಗಿ ಸಲಹುವುದು ಸಾಕಷ್ಟು ಜನಪ್ರಿಯವಾಗಿದೆ. ಹಾವುಗಳನ್ನು ಸಾಕುವ ಹವ್ಯಾಸಿಗಳೇ ಅವುಗಳ ನೈಸರ್ಗಿಕ ಇತಿಹಾಸ, ಸ್ವಭಾವ ಹಾಗೂ ರೋಗಗಳ ಬಗ್ಗೆ ಪ್ರಮುಖವಾದ ತಿಳುವಳಿಕೆಯನ್ನು ನೀಡಿದ್ದಾರೆ. ಸಾಮಾನ್ಯವಾಗಿ ಭಯ ಉಂಟುಮಾಡುವ ಈ ಸರೀಸೃಪಗಳ ಬಗ್ಗೆ ಜನರ ಮನಸ್ಸಿನಲ್ಲಿ ಒಂದು ಹೊಸ ಸ್ಥಾನ ಸೃಷ್ಟಿಸುವ ಪ್ರಮುಖ ಪ್ರಯತ್ನ ಹಾಗೂ ತೃಪ್ತಿ ತರುವ ಕ್ರಿಯೆ ಮನೆಯಿಂದಲೇ ಪ್ರಾರಂಭವಾಗಬೇಕು.

## ಕಟ್ಟುಕಥೆಗಳು ಮತ್ತು ನಂಬಿಕೆಗಳು

ಹಾವುಗಳ ಬಗ್ಗೆ ಭಾರತದ ಪ್ರತಿ ಹಳ್ಳಿ ಹಾಗೂ ಪ್ರದೇಶದಲ್ಲೂ ವಿಚಿತ್ರವಾದ ಸಾಮಾನ್ಯವಾಗಿ ಕೆಡುಕು ಉಂಟುಮಾಡುವಂತಹ ನಂಬಿಕೆ ಹಾಗೂ ಕಟ್ಟುಕಥೆಗಳಿವೆ. ಈ ಕಥೆಗಳನ್ನು ವಾಸ್ತವವೆಂದು ತಿಳಿಯಬಾರದು. ಹಾವಿನ ಬಗ್ಗೆ ಇರುವ ಜಾನಪದ ಸಂಪತ್ತಿನ ಕೆಲವು ತುಣುಕುಗಳು ಹೀಗಿವೆ :

1. ಕಾಶ್ಮೀರದಲ್ಲಿನ ಒಂದು ಪುಟ್ಟ ಹಾವು ಅದೆಷ್ಟು ವಿಷಕಾರಿಯೆಂದರೆ, ಅದು ಹರಿದಾಗ ಮಂಜುಗಡ್ಡೆಯೂ ಕರಗಿ ನೀರಾಗುತ್ತದಂತೆ.

2. ನೀವು ಒಂದು ಹಾವನ್ನು ಕೊಂದರೆ, ಮತ್ತೊಂದು ಹಾವು(ಅದರ ಬಾಳ ಸಂಗಾತಿ) ನಿಮ್ಮನ್ನು ಹಿಂಬಾಲಿಸಿ ಸೇಡು ತೀರಿಸಿಕೊಳ್ಳುವುದೆಂದು ಹೇಳಲಾಗುತ್ತದೆ. ಇದು ಸತ್ಯವಲ್ಲ. ಆದರೆ ಈ ನಂಬಿಕೆ ಹುಟ್ಟಿರುವುದಕ್ಕೆ ಸ್ವಲ್ಪ ಆಧಾರವಿದೆ. ನೀವು ಹಾವನ್ನು ಕೊಂದಾಗ, ಅದು ತನ್ನ ಗುದನಾಳದ ಮೂಲಕ ವಾಸನಾ ದ್ರವ್ಯವನ್ನು ಹೊರಚೆಲ್ಲುತ್ತದೆ. ಬಳಿಯಲ್ಲಿರುವ ಮತ್ತೊಂದು ಹಾವು ಈ ವಾಸನಾದ್ರವ್ಯ (ಲೈಂಗಿಕ ಆಕರ್ಷಣೆಯ ವಸ್ತು) ಏಕೆ ಬಂತೆಂದು ತಿಳಿಯಲು ಅಲ್ಲೆಲ್ಲಾ ಸುತ್ತಾಡಬಹುದು.

3 ಹಾವುಗಳು ಹಾಲನ್ನು ಇಷ್ಟ ಪಡುತ್ತವೆಂದು ಹೇಳಲಾಗುತ್ತದೆ. ಅವಕ್ಕೆ ಪ್ರಕೃತಿಯಲ್ಲಿ ಹಾಲು ದೊರಕುವುದಾದರೂ ಎಲ್ಲಿ? ಹಾವಿನ ಬಾಯಂಗಳಕ್ಕೆ ಹಾಲನ್ನು ಕುಡಿಯುವ ಶಕ್ತಿಯಿಲ್ಲದಿರುವಾಗ ಮತ್ತು ಬಾಯಲ್ಲಿ ಚೂಪಾಗಿರುವ ನೂರಾರು ಹಲ್ಲುಗಳಿರುವಾಗ, ಹಾವು ಹೇಗೆ ತಾನೆ ಹಾಲನ್ನು ಕುಡಿಯಬಹುದು? ಹಾಲಿನ ಕೆಲವು ಗುಟುಕುಗಳು ಹಾವಿಗೆ ಪೂರ್ಣ ಆಹಾರಾಂಶವನ್ನು ಪೂರೈಸಬಲ್ಲುದೇ? ಮುಂತಾದ ಪ್ರಶ್ನೆಗಳನ್ನು ನಾವು ಪರಿಗಣಿಸಬೇಕು.

4. ಹಾವುಗಳು ಸಂಗೀತಕ್ಕೆ ತಲೆದೂಗುತ್ತವೆಂದು ಹೇಳಲಾಗುತ್ತದೆ. ಗಾಳಿಯ ಮೂಲಕ ಬರುವ ಕೆಲವು ಶಬ್ದಗಳನ್ನು ಹಾವುಗಳು ಕೇಳಬಲ್ಲವೆಂದು ಇತ್ತೀಚೆಗೆ ನಿರ್ಧಾರ ಪೂರ್ವಕವಾಗಿ ಗೊತ್ತಿದ್ದರೂ, ಹಾವುಗಳು ಸಂಗೀತವನ್ನು ಮೆಚ್ಚುತ್ತವೆ ಎಂಬುದಕ್ಕೆ ಆಧಾರವಿಲ್ಲ. ವಾಸ್ತವವಾಗಿ ಸ್ವಾಭಾವಿಕವಾಗಿಯೇ ಅವು ಯಾವುದೇ ರೀತಿಯ ಕೃತಕ ಕಂಪನಗಳಿಂದ ದೂರ ಸರಿಯುತ್ತವೆ. ಹಾವಾಡಿಗನ ಪುಂಗಿಯ ನಾದವು ಕೇವಲ ವೀಕ್ಷಕರಿಗೆ ಮೋಡಿ ಹಾಕುತ್ತದಷ್ಟೆ.

5. ಹಾವಿನ ತಲೆಯ ಮೇಲೆ ಬೆಳಕು ಅಥವಾ ಮಣಿ ಇರುತ್ತದೆಂಬ ಜನಪದ ನಂಬಿಕೆಗೆ ಹಾವುಗಳನ್ನು ಹಿಡಿಯುವ ಬಡ ಇರುಳ ಬುಡಕಟ್ಟಿನ ಜನ ನೀಡುವ ಉತ್ತರ ಹೆಚ್ಚು ಸಮಂಜಸವಾದುದು. ಈ ನಂಬಿಕೆಯ ಬಗ್ಗೆ ಇರುಳರನ್ನು ಕೇಳಿದಾಗ ಅವರು "ಒಂದು ವೇಳೆ ಆ ನಂಬಿಕೆ ನಿಜವಾಗಿದ್ದರೆ ನಾವು ಹಾವು ಹಿಡಿಯುವ ಬದಲು ರಾಜ ಮಹಾರಾಜರಾಗುತ್ತಿದ್ದೆವು" ಎಂದು ಉತ್ತರಿಸುತ್ತಾರೆ.

6. ಅನೇಕ ವೇಳೆ ಜನರು ಕೂದಲುಗಳಿರುವ ಅಥವಾ ತಲೆಯ ಮೇಲೆ ಹುಂಜದಲ್ಲಿರುವಂತಹ ಜುಟ್ಟಿರುವ ಹಾವನ್ನು ನೋಡಿದೆವೆಂದು ಹೇಳುತ್ತಾರೆ. ಇದು ಬಹುಶಃ ಉದ್ದೇಶಪೂರ್ವಕವಾಗಿಯೇ ಹಾವಾಡಿಗರು ಮಾಡಿದ ಕೃತ್ರಿಮ ತಂತ್ರವಿರಬಹುದು ಅಥವಾ ಹಾವು ಪೊರೆಬಿಡಲು ಪ್ರಾರಂಭಿಸಿ ಮೇಲ್ದವಡೆ ಹಾಗೂ ಕೆಳದವಡೆಗಳಿಂದ ಆರಂಭಿಸಿದಾಗ ಹಾವಿನ ಪೊರೆ ಶರೀರದಿಂದ ಸುಲಿದು ಬರುವುದು ಖಂಡಿತವಾಗಿ ತುಂಬ ವಿಚಿತ್ರವಾಗಿ ಕಾಣುತ್ತದೆ.

7. ಹಸಿರುಹಾವು ಮನುಷ್ಯನ ಕಣ್ಣುಗಳನ್ನು ಕುಕ್ಕಿ ಹೊರಗೆಳೆಯುತ್ತದೆ ಅಥವಾ ಹಣೆಗೆ 'ಚುಚ್ಚು'ತ್ತದೆಂದು ಹೇಳಲಾಗುತ್ತದೆ. ವಾಸ್ತವವಾಗಿ ಈ ನಿರುಪದ್ರವಿ ಹಾವಿನ ಮೂತಿಯು ಮೃದುವಾಗಿ ರಬ್ಬರಿನಂತಿರುತ್ತದೆ. ಹಸಿರುಹಾವು ಮನುಷ್ಯನ ಬೆರಳನ್ನು, ಅಪರೂಪಕ್ಕೆ ಮೂಗನ್ನು ಕಚ್ಚಿ(ಆದರೆ ಅಪಾಯವಿಲ್ಲ) ನೋವನ್ನುಂಟುಮಾಡ ಬಹುದು. ಆದರೆ ಹಸಿರು ಹಾವಿನಿಂದ ಯಾರ ಕಣ್ಣಿಗೂ ಗಾಯವಾಗಿಲ್ಲ.

8. ಸಾಮಾನ್ಯ ಮರಳ ಹೆಬ್ಬಾವು ನಾಲಿಗೆಯಿಂದ ನೆಕ್ಕುವುದರಿಂದ ಕುಷ್ಠರೋಗ ಬರುತ್ತದೆಂದು ಹೇಳಲಾಗುತ್ತದೆ. ಈ ನಿರುಪದ್ರವಿ ಹಾವಿನ ಬಣ್ಣದ ವಿನ್ಯಾಸವು ಕುಷ್ಠ ರೋಗಿಗಳ ಚರ್ಮವನ್ನು ಹೋಲುವುದರಿಂದ ಜನರಲ್ಲಿ ಈ ನಂಬಿಕೆ ಬಂದಿರಬಹುದು. ವಾಸ್ತವವಾಗಿ ಈ ಹಾವುಗಳು ಚೊಕ್ಕವಾಗಿದ್ದು ರೋಗದಿಂದ ಮುಕ್ತವಾಗಿರುತ್ತವೆ.
9. ದಕ್ಷಿಣ ಭಾರತದ ಮರಗಳಲ್ಲಿ ವಾಸಿಸುವ ಕಂಚು ಬೆನ್ನಿನ ಹಾವುಗಳ ಮೇಲೆ ಅವು ವಿಷಕಾರಿಯೆಂಬ ದೋಷಾರೋಪವಿದೆಯಷ್ಟೇ ಅಲ್ಲ, ಕಚ್ಚಿದ ನಂತರ ಅವು ಎತ್ತರದ ಮರವೇರಿ ಸತ್ತವನ ಹೆಣ ಸುಡುವುದನ್ನು ನೋಡುತ್ತವಂತೆ!
10. ಕೇರೆ ಹಾವುಗಳ ಬಾಲದ ಬಗ್ಗೆ ಹಲವಾರು ರೋಚಕ ಕಥೆಗಳಿದ್ದರೂ ಬಾಲವು ಒಂದು ಹಗ್ಗದ ತುಂಡಿಗಿಂತ ಹೆಚ್ಚು ಅಪಾಯಕಾರಿಯಲ್ಲ. ಅದರಲ್ಲಿ ವಿಷದ ಮುಳ್ಳುಗಳಿಲ್ಲ ; ಹಸುಗಳನ್ನು ಹಿಸುಕಿ ಉಸಿರುಗಟ್ಟಿಸುವುದೂ ಇಲ್ಲ, ನಿಂತ ತೆನೆಯಿಂದ ಕಾಳುಗಳನ್ನು ಬಾಲಬೀಸಿ ಉದುರಿಸುವುದೂ ಇಲ್ಲ.
11. ಬಳೆಗಳ ಆಕಾರವನ್ನು ಶರೀರದ ಮೇಲೆ ಹೊಂದಿರುವ ಹಾವು ಕಡಿದಾಗ, ಕಚ್ಚಿಸಿಕೊಂಡ ವ್ಯಕ್ತಿಯ ಶರೀರದ ಮೇಲೂ ಅದೇ ರೀತಿಯ ಬಳೆಗಳ ಆಕಾರ ಮೂಡುವುದಿಲ್ಲ.
12. ಕಡಂಬಳ ಹಾವುಗಳು ಮನುಷ್ಯ ನಿದ್ದೆ ಮಾಡುವಾಗ ಆತನ ಉಸಿರನ್ನು ಹೀರಿ ತೆಗೆಯುತ್ತವೆಂದು ವಾಯವ್ಯ ಭಾರತದಲ್ಲಿ ಜನ ನಂಬುತ್ತಾರೆ. ಬಹುಶಃ ಇದು ಕಡಂಬಳ ಹಾವಿನ ತೀವ್ರ ಕಡಿತದಿಂದ ಉಂಟಾಗುವ ಉಸಿರಾಟದ ಲಕ್ಷಕ್ಕೆ ರೈತ–ಕೂಲಿಕಾರರು ನೀಡುವ ವಿವರಣೆಯಿರಬಹುದು.
13. ಸದಾ ನೆಲದ ಮೇಲಿರುವ ಗರಗಸ ಹುರುಪೆಯ ಮಂಡಲ ಹಾವುಗಳು ಗಾಳಿಯಲ್ಲಿ 6 ಅಡಿ ಅಥವಾ ಅದಕ್ಕಿಂತ ಹೆಚ್ಚು ಮೇಲಕ್ಕೆ ಎಗರುತ್ತವೆಂಬ ನಂಬಿಕೆ ಮಹಾರಾಷ್ಟ್ರದಲ್ಲಿದೆ. ಆರು ಅಂಗುಲ ಎನ್ನುವುದು ಸರಿಯಾದೀತು.
14. ಮನೆಯ ಹಿತ್ತಲಲ್ಲಿ ನಾಗರಹಾವು ವಾಸವಾಗಿರುವುದು ಶುಭ ಸೂಚಕವೆಂದು ಪಶ್ಚಿಮ ತೀರ ಪ್ರದೇಶದ ಜನ ನಂಬುತ್ತಾರೆ. ಕೇರಳದ ಅನೇಕ ಹಿಂದುಗಳು ನಾಗರಗುಡಿ ಮತ್ತು ಅವರ 'ಮನೆತನದ ನಾಗರ' ಹಾವಿಗೆ ಎಡೆ ಅರ್ಪಿಸಲು ಸ್ಥಳವೊಂದನ್ನು ಹೊಂದಿರುತ್ತಾರೆ.
15. ನಾಗರಹಾವುಗಳು ಕೇರೆಹಾವುಗಳ ಜೊತೆ ಕೂಡುತ್ತವೆಂಬ ನಂಬಿಕೆಯಿದೆ. ವಾಸ್ತವವಾಗಿ ನಾಗರಹಾವಿನ ಗಂಡು ಮತ್ತು ಹೆಣ್ಣುಗಳಷ್ಟೇ ಕೂಡುತ್ತವೆ. ಅಲ್ಲದೆ ಕೆಲವೊಮ್ಮೆ ಹಾವುಗಳನ್ನು ತಿನ್ನುವ ದೊಡ್ಡ ಕೇರೆಹಾವುಗಳಿಂದ ಸಾಮಾನ್ಯವಾಗಿ ನಾಗರಹಾವುಗಳು ದೂರವಿರುತ್ತವೆ.
16. ಹಾವಿನ ಕಡಿತದ ಚಿಕಿತ್ಸೆಗೆ ಮಂತ್ರ ಹಾಕುವುದರಿಂದ ಹಿಡಿದು ಗಿಡಮೂಲಿಕೆಯ ಮದ್ದಿನವರೆಗೆ ಮತ್ತು ದೂರವಾಣಿಯಿಂದಲೇ ಚಿಕಿತ್ಸೆ ನೀಡುವವರೆಗೆ ನೂರಾರು ಕಟ್ಟು ಕಥೆಗಳಿವೆ. ಭಾರತದಲ್ಲಿ ವಿಷದ ಹಾವಿನ ಕಡಿತಕ್ಕೆ ಪರಿಣಾಮ ಬೀರುವ ಒಂದೇ ಒಂದು ಚಿಕಿತ್ಸೆಯೆಂದರೆ ವಿಷನಿರೋಧಕ ಸೀರಂ ಅಥವಾ ಹಾವು ಕಡಿತದ ಪ್ರತಿವಿಷ ಸೀರಂ ಚಿಕಿತ್ಸೆ. ಬೇರೆ 'ಚಿಕಿತ್ಸಾ ವಿಧಾನಗಳು' ವ್ಯಕ್ತಿಯ ಭಯ ಮತ್ತು ಮಾನಸಿಕ ಆಘಾತಗಳನ್ನು ತೊಡೆದುಹಾಕಲು ಮಾತ್ರ ಸಹಕಾರಿ. ಈ ವಿಧಾನಗಳನ್ನು ಪ್ರತಿವಿಷ

ಚಿಕಿತ್ಸೆಯ ಬದಲಾಗಿ ಅಥವಾ ಜೊತೆಯಲ್ಲಾಗಲಿ ನೀಡಬಾರದು(ಹಾವಿನ ಕಡಿತದ ಅಧ್ಯಾಯ ನೋಡಿ).

17. ಕೆಂಪು ಮರಳ ಹೆಬ್ಬಾವಿಗೆ ತುಂಬ ಮೊಂಡಾದ ಬಾಲವಿದೆ. ಇದರಿಂದಾಗಿ 'ಎರಡು ತಲೆಗಳ ಹಾವು'ಗಳ ಬಗ್ಗೆ ಹಲವಾರು ಜನಪ್ರಿಯ ಕಥೆಗಳಿವೆ. ತನ್ನ ಮೊಂಡು ಬಾಲ ತೋರಿಸಿ, ಮುಂಗುಸಿ ಹಾಗೂ ಇತರೆ ಪರಭಕ್ಷಕ ಪ್ರಾಣಿಗಳು ಮೋಸ ಹೋಗುವಂತೆ ಮಾಡಿ ಈ ಹಾವು ತಲೆ ತಪ್ಪಿಸಿಕೊಳ್ಳುತ್ತದೆ. ಅದೇ ರೀತಿ ಹೆಚ್ಚಿನ ಜನರು ಸಹ ಎರಡು ತಲೆ ಹಾವಿದೆಯೆಂದು ನಂಬಿ ಮೋಸಹೋಗುತ್ತಾರೆ.

# ಹಾವಿನ ಕಡಿತ

ಹಾವಿನ ಕಡಿತದಿಂದ ಸಾಮಾನ್ಯವಾಗಿ ಸಾವುಂಟಾಗುವುದಿಲ್ಲ. ಹಾವು ಕಚ್ಚಿದ ಯಾವುದೇ ಪ್ರಕರಣ ಅಪಾಯಕಾರಿಯೋ ಅಲ್ಲವೋ ಎಂಬುದು, ವ್ಯಕ್ತಿಗೆ ಹಾವು ಎಷ್ಟು ವಿಷ ಚುಚ್ಚಿದೆ ಎಂಬುದನ್ನು ಅವಲಂಬಿಸಿರುತ್ತದೆ. ಹಾವು ಕಚ್ಚಿದ ಎಲ್ಲ ಪ್ರಕರಣಗಳನ್ನೂ ತುರ್ತೆಂದು ಪರಿಗಣಿಸಿ ಚಿಕಿತ್ಸೆ ನೀಡಬೇಕು. ಒಂದು ವೇಳೆ ಹೆಚ್ಚಿನ ವಿಷ ವ್ಯಕ್ತಿಗೆ ಸೇರಿದ್ದರೆ ತೀರ ಹೆಚ್ಚಿನ ಗಮನ ಕೊಡಬೇಕು. ಭಾರತದಲ್ಲಿ ಸಾಮಾನ್ಯವಾಗಿರುವ ಎಲ್ಲ ನಾಲ್ಕು ವಿಷದ ಹಾವುಗಳ ಕಡಿತಕ್ಕೂ ಪರಿಣಾಮಕಾರಿಯಾಗಿರುವ ಪ್ರತಿವಿಷವನ್ನು ಅದೃಷ್ಟ ವಶಾತ್ ಬಾಂಬೆಯಲ್ಲಿರುವ ಹಾಫ್‌ಕಿನ್ ಸಂಸ್ಥೆಯು ತಯಾರಿಸುತ್ತದೆ. ಈ ಪ್ರತಿವಿಷವನ್ನು ಸಾಮಾನ್ಯವಾಗಿ ಎಲ್ಲ ಸರ್ಕಾರಿ ಆಸ್ಪತ್ರೆಗಳಲ್ಲಿಟ್ಟಿರುತ್ತಾರೆ. ಒಂದು ವೇಳೆ ಎಲ್ಲ ಪ್ರಾಥಮಿಕ



ಹಾವುಕಚ್ಚಿದ ತಕ್ಷಣ ಸರಿಗುಣಿಕೆ ಕಟ್ಟನ್ನು ಬಿಗಿಯಬೇಕು;
ಪ್ರತಿವಿಷದ ಇಂಜೆಕ್ಷನ್ ನೀಡಿದಾಗ ಕಟ್ಟನ್ನು ತುಂಬ ನಿಧಾನವಾಗಿ ಬಿಚ್ಚಬೇಕು.

ಆರೋಗ್ಯ ಕೇಂದ್ರಗಳಲ್ಲಿಯೂ ಅದರಲ್ಲಿಯೂ ಮುಖ್ಯವಾಗಿ ಗ್ರಾಮೀಣ ಪ್ರದೇಶಗಳ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಈ ಪ್ರತಿವಿಷವನ್ನು ಸಂಗ್ರಹಿಸಿ ಇಟ್ಟುಕೊಂಡಲ್ಲಿ ಇಂದು ವರದಿಯಾಗುತ್ತಿರುವ ಸಾವುಗಳ ಪ್ರಮಾಣವನ್ನು ತುಂಬ ಕಡಿಮೆ ಮಾಡಬಹುದು.

## ಪ್ರಥಮ ಚಿಕಿತ್ಸೆ

1. ಹಾವು ಕಚ್ಚಿಸಿಕೊಂಡ ವ್ಯಕ್ತಿಯು ಉದ್ವೇಗಗೊಳ್ಳಲು ಬಿಡಬೇಡಿ, ಶಾಂತಿಯಿಂದಿರುವಂತೆ ಮಾಡಿ.
2. ಹಾವು ಕೈಗೆ ಕಚ್ಚಿದ್ದರೆ ತೋಳಿನ ಭಾಗದಲ್ಲಿ; ಕಾಲಿಗೆ ಕಚ್ಚಿದ್ದರೆ ತೊಡೆಯ ಭಾಗದಲ್ಲಿ ಒಂದು ಬಟ್ಟೆಯಿಂದ ತಕ್ಷಣ ಸರಿಗುಣಿಕೆ ಹಾಕಿ ಆದಷ್ಟು ರಕ್ತ ಚಲನೆ ನಿಲ್ಲುವಷ್ಟು ಗಟ್ಟಿಯಾಗಿ ಕಟ್ಟಿ ಅಥವಾ ಬಿಗಿಯಿರಿ (ಕಟ್ಟಿನೊಳಗೆ ನೀವು ಒಂದು ಬೆರಳನ್ನು ತೂರಿಸುವಂತಿರಬೇಕು).
3. ಕಚ್ಚಿಸಿಕೊಂಡ ವ್ಯಕ್ತಿಗೆ ವಿಶ್ವಾಸ, ಧೈರ್ಯ ತುಂಬಲು ಹಾಗೂ ಸಾಯುತ್ತೇನೆಂಬ ಭಯ ನಿವಾರಿಸಲು ನೀವು ಸಾಧ್ಯವಾದರೆ ಆಸ್ಪಿರಿನ್ ಮಾತ್ರೆ, ಸ್ವಲ್ಪ ಪ್ರಮಾಣದ ಬ್ರಾಂದಿ ಅಥವಾ ಅಪಾಯವಿಲ್ಲದ ಇಂಜೆಕ್ಷನ್ ಒಂದನ್ನು ನೀಡಬಹುದು.
4. ಹಾವು ಕಚ್ಚಿದ ವ್ಯಕ್ತಿಯನ್ನು ತಕ್ಷಣ ಪ್ರತಿವಿಷ ದೊರೆಯುವ ಅತಿ ಹತ್ತಿರದ ಸ್ಥಳಕ್ಕೆ ಕರೆದುಕೊಂಡು ಹೋಗಬೇಕು. ಆತ ಏನನ್ನೂ ಮಾಡದೆ ಸುಮ್ಮನಿರುವಂತೆ ನೋಡಿಕೊಳ್ಳಿ. ಮಾನಸಿಕ ಆಘಾತಕ್ಕೆ ಸಾಂತ್ವನ ನೀಡಿ(ಕಾಲುಗಳನ್ನು ಮೇಲಕ್ಕೆ ಎತ್ತಿಡಿ, ಹೊದಿಕೆಯನ್ನು ನೀವೇ ಹೊದಿಸಿ).

**ಸೂಚನೆ :** ಒಂದು ವೇಳೆ ಹಾವು ಕಚ್ಚಿಸಿಕೊಂಡ ವ್ಯಕ್ತಿ ವಾಂತಿ ಮಾಡಿಕೊಂಡರೆ, ಮಗ್ಗುಲಿಗೆ ಅಥವಾ ನೆಲಕ್ಕೆ ಮುಖವಿರುವಂತೆ ಮಲಗಿಸಿ. ಇದರಿಂದ ವಾಂತಿಯು ಗಂಟಲಿಗೇರಿ ಉಸಿರುಗಟ್ಟುವುದನ್ನು ನಿಲ್ಲಿಸಬಹುದು.

## ಚಿಹ್ನೆಗಳು

ಹಾವು ಕಚ್ಚಿದಾಗ ಬೇರೆಯವರು ಕಚ್ಚಿದ ಹಾವನ್ನು ಸಾಮಾನ್ಯವಾಗಿ ನೋಡಿರುವುದಿಲ್ಲ ಅಥವಾ ಅವರಿಗೆ ಅದು ಯಾವ ಹಾವೆಂದು ಗುರುತಿಸುವುದು ಗೊತ್ತಿರುವುದಿಲ್ಲ. ಆದ್ದರಿಂದ ಹಾವು ಕಚ್ಚಿಸಿಕೊಂಡ ವ್ಯಕ್ತಿಯಲ್ಲಿ ಕಾಣುವ ಚಿಹ್ನೆಗಳಿಂದಲೇ ನಾವು ಯಾವ ಹಾವು ಕಚ್ಚಿರಬಹುದೆಂಬುದನ್ನು ತಿಳಿಯಬೇಕು. ಕಚ್ಚಿದ ಜಾಗದಲ್ಲಿ ನೋವಿಲ್ಲದಿದ್ದರೆ ಅಥವಾ ಊತವಿಲ್ಲದಿದ್ದರೆ, ಕಚ್ಚಿದ್ದು ವಿಷವಲ್ಲದ ಹಾವಾಗಿರುವ ಸಾಧ್ಯತೆ ಹೆಚ್ಚಿರುತ್ತದೆ (ಆದರೂ ಕಡಂಬಳ ಹಾವಿನ ಕಡಿತದ ಬಗ್ಗೆ ಓದಿ ತಿಳಿದುಕೊಳ್ಳಿ). ಮಾನಸಿಕ ಆಘಾತದ ಚಿಹ್ನೆಗಳನ್ನು(ತಣ್ಣನೆ ಬೆವರು, ಜ್ಞಾನ ತಪ್ಪುವುದು, ವಾಂತಿ, ಓಕರಿಕೆ) ವಿಷವೇರುವ ಚಿಹ್ನೆಗಳೆಂದು ತಪ್ಪು ತಿಳಿಯುವ ಅಗತ್ಯವಿಲ್ಲ. ಭಾರತದಲ್ಲಿನ ನಾಲ್ಕು ದೊಡ್ಡ ವಿಷದ ಹಾವುಗಳು ಕಚ್ಚಿದಾಗ ಕಂಡುಬರುವ ಚಿಹ್ನೆಗಳನ್ನು ಈ ಕೆಳಗೆ ಪಟ್ಟಿಮಾಡಲಾಗಿದೆ. ಇದರಿಂದ ಯಾವ ಹಾವು ಕಚ್ಚಿರಬಹುದೆಂದು ತಿಳಿಯಲು ಮತ್ತು ಸೂಕ್ತ ಚಿಕಿತ್ಸೆ ನೀಡಲು ಅನುಕೂಲವಾಗಬಹುದು.

*ನಾಗರಹಾವು :*

ನಾಗರಹಾವಿನ ವಿಷ ನರಮಂಡಲದ ಮೇಲೆ ಪ್ರಭಾವ ಬೀರುತ್ತದೆ. ಅದು ಚಾಲಕ ನರ ಕೇಂದ್ರಗಳನ್ನು ನಿಶ್ಚೇಷ್ಟಿತಗೊಳಿಸುವುದರಿಂದ ಉಸಿರಾಟ ನಿಲ್ಲುತ್ತದೆ ಮತ್ತು ಹೃದಯ ಸ್ಥಂಭನವಾಗಿ ಸಾವು ಬರುತ್ತದೆ. ನಾಗರಹಾವು ಕಚ್ಚಿಸಿಕೊಂಡ ವ್ಯಕ್ತಿಯಲ್ಲಿ ಕಾಣುವ ಸಾಮಾನ್ಯ ಚಿಹ್ನೆಗಳು ಹೀಗಿವೆ :–

1. ಕಚ್ಚಿರುವ ಜಾಗದಲ್ಲಿ ನೋವು (ಇಲ್ಲದೆಯೂ ಇರಬಹುದು).
2. ಬಾವು ಉಂಟಾಗಬಹುದು (ಕೆಲವೊಮ್ಮೆ ಒಂದು ಗಂಟೆ ಅಥವಾ ಅದಕ್ಕಿಂತ ಹೆಚ್ಚು ಕಾಲದ ನಂತರ ಊತ ಉಂಟಾಗಬಹುದು). ಮತ್ತು ಕೆಲವೊಮ್ಮೆ ಹುಣ್ಣಾಗ ಬಹುದು (ಅನಂತರ ಕಚ್ಚಿದ ಗಾಯದ ಸುತ್ತ ಇರುವ ಅಂಗಾಂಶ ಸಾಯಬಹುದು).
3. ಕಣ್ಣು ನೋಟ ಮಂಜಾಗಬಹುದು.
4. ಕಣ್ಣುಗುಡ್ಡೆಗಳು ಇಳಿಬೀಳುವುವು, ಕಾಲುಗಳಲ್ಲಿ ಸ್ಥಿಮಿತ ತಪ್ಪುವುದು.
5. ನಾಲಿಗೆ ದಪ್ಪವಾದಂತೆ ಅನಿಸುವುದು, ಮಾತುಗಳು ತೊದಲುತ್ತವೆ ಮತ್ತು ಜೊಲ್ಲು ಸುರಿಯಲು ಪ್ರಾರಂಭಿಸುತ್ತದೆ.
6. ಆಲಸ್ಯ ಮನೆ ಮಾಡುತ್ತದೆ, ಅಂಗಾಂಗಗಳ ಚಲನೆಯಲ್ಲಿ ಹೊಂದಾಣಿಕೆಯಿರುವುದಿಲ್ಲ.
7. ಉಸಿರಾಟದ ತೊಂದರೆ, ಕೋಮಸ್ಥಿತಿ ಮತ್ತು ಸೆಳವು ಬರುತ್ತದೆ.

*ಸಾಮಾನ್ಯ ಕಡಂಬಳ :*

ಕಡಂಬಳದ ವಿಷದಂತಗಳು ಚಿಕ್ಕದಾಗಿರುತ್ತವೆ. ಈ ಹಾವಿನ ವಿಷ ಹೆಚ್ಚು ಅಪಾಯಕಾರಿ. ನಾಗರಹಾವಿನ ವಿಷಕ್ಕೆ ಹೋಲಿಸಿದರೆ ಈ ಹಾವಿನ ವಿಷ ಬಹುಶಃ ಎಂಟುಪಟ್ಟು ಹೆಚ್ಚು ವಿಷಕಾರಿ. ಕಡಂಬಳ ಹಾವು ಕಚ್ಚಿ 3 ರಿಂದ 5 ಗಂಟೆಗಳ ನಂತರ ಹಾವು ಕಚ್ಚಿಸಿಕೊಂಡ ವ್ಯಕ್ತಿಯಲ್ಲಿ ಸಾಮಾನ್ಯವಾಗಿ ಕಂಡುಬರುವ ಚಿಹ್ನೆಗಳು ಕೆಳಗೆ ಸೂಚಿಸಿರುವ ಚಿಹ್ನೆಗಳನ್ನು ಬಿಟ್ಟರೆ ಮಿಕ್ಕವು– ನಾಗರಹಾವಿನ ಕಡಿತದ ಚಿಹ್ನೆಗಳನ್ನೇ ಹೋಲುತ್ತವೆ:–

1. ಸಾಮಾನ್ಯವಾಗಿ ಹಾವು ಕಚ್ಚಿದ ಜಾಗದಲ್ಲಿ ನೋವಾಗಲಿ ಅಥವಾ ಊತವಾಗಲಿ ಇರುವುದಿಲ್ಲ (ಇದು ಕಡಂಬಳ ಹಾವಿನ ಕಡಿತದ ಅಪಾಯಕಾರಿ ಅಂಶ).
2. ಹಾವು ಕಚ್ಚಿದ ಕೆಲವು ಗಂಟೆಗಳವರೆಗೆ ಚಿಹ್ನೆಗಳು ಕಾಣದಿರಬಹುದು. ಆನಂತರ ಚಿಹ್ನೆಗಳು ತೀವ್ರಗತಿಯಲ್ಲಿ ಕಂಡುಬರಬಹುದು.
3. 6 ರಿಂದ 12 ಗಂಟೆಗಳ ಕಾಲ ತೀವ್ರವಾದ ಹೊಟ್ಟೆನೋವು ಹಾಗೂ ಸಂದುಗಳ ನೋವು ಉಂಟಾಗಬಹುದು. ಕಡಂಬಳ ಹಾವುಗಳ ಕಚ್ಚುವಿಕೆ ಸಾಮಾನ್ಯವಾಗಿ ರಾತ್ರಿವೇಳೆ ಉಂಟಾಗುತ್ತವೆ. ಕಚ್ಚಿದಾಗ ಹಾವು ಕಣ್ಣಿಗೆ ಬೀಳುವುದು ತುಂಬ ಅಪರೂಪ ವಾದ್ದರಿಂದ, ರಾತ್ರಿ ವೇಳೆ ಹಾವು ಕಚ್ಚಿದ ಪ್ರಕರಣ ಗೊತ್ತಾದರೆ ಕಚ್ಚಿಸಿಕೊಂಡ ವ್ಯಕ್ತಿಯನ್ನು ಪ್ರತಿವಿಷ ಚಿಕಿತ್ಸೆ ದೊರೆಯುವ ಅತಿ ಸಮೀಪದ ಸ್ಥಳಕ್ಕೆ (ವೈದ್ಯ ಅಥವಾ ಆಸ್ಪತ್ರೆ) ತಡಮಾಡದೆ ಕೊಂಡೊಯ್ಯುವುದು ಒಳ್ಳೆಯ ಮಾರ್ಗ. ರಾತ್ರಿ ವೇಳೆ ಹಾವು ಕಚ್ಚಿದರೆ ಸೂರ್ಯೋದಯ ಆಗುವುದರೊಳಗೆ ಕಚ್ಚಿಸಿಕೊಂಡ ವ್ಯಕ್ತಿ ಸಾಯುತ್ತಾನೆಂಬ



ನಾಗರ ಹಾವಿನ ಚಿಕ್ಕ ಹಾಗೂ ಸ್ಥಿರ ವಿಷದಂತ. ಕಣ್ಣಿನ ಹಿಂಭಾಗದಲ್ಲಿ ವಿಷಗ್ರಂಥಿಯಿರುತ್ತದೆ. ವಿಷನಾಳವು ವಿಷವನ್ನು ಗ್ರಂಥಿಯಿಂದ ವಿಷದಂತಕ್ಕೆ ತಲುಪಿಸುತ್ತದೆ.



ನಾಗರಹಾವಿನ ಕಡಿತದಿಂದ ಉಂಟಾಗಿರುವ ಬಾವು. ಕಡಂಬಳ ಹಾವಿನ ಕಡಿತವು ಇಷ್ಟು ಬಾವುಂಟು ಮಾಡುವುದಿಲ್ಲ. ಆದರೆ ಅದು ಹೆಚ್ಚು ಅಪಾಯಕಾರಿ.

ನಂಬಿಕೆಯಿದೆ. ಒಂದು ವೇಳೆ ಹಾವಿನ ಕಡಿತ ತೀವ್ರವಾಗಿದ್ದು ಪ್ರತಿವಿಷ ಚಿಕಿತ್ಸೆ ನೀಡದಿದ್ದಲ್ಲಿ ಈ ಹೇಳಿಕೆಯಂತೆಯೇ ಸಾವುಂಟಾಗುತ್ತದೆ.

*ರಸೆಲ್ಸ್ ಮಂಡಲ :*

ರಸೆಲ್ಸ್ ಮಂಡಲಹಾವಿನ ವಿಷದಂತಗಳು ಒಂದು ಸೆಂಟಿಮೀಟರಿಗಿಂತಲೂ ಉದ್ದವಾಗಿರುತ್ತವೆ. ಇದರ ವಿಷವು ರಕ್ತದ ಮೇಲೆ ಪರಿಣಾಮ ಉಂಟುಮಾಡುತ್ತದೆ. ರಕ್ತ ಹೆಪ್ಪುಗಟ್ಟುತ್ತದೆ, ಗರಣೆಕಟ್ಟುವಿಕೆಯ ಗುಣ ಕಳೆದುಕೊಳ್ಳುತ್ತದೆ ಮತ್ತು ಊತಕಗಳು ನಾಶಗೊಳ್ಳುತ್ತವೆ. ನಾಗರಹಾವಿನ ವಿಷಕ್ಕೆ ಹೋಲಿಸಿದರೆ ಈ ಹಾವಿನ ವಿಷದ ಪರಿಣಾಮ ಮೂರನೇ ಒಂದು ಭಾಗದಷ್ಟು ಮಾತ್ರ. ಆದರೆ ರಸೆಲ್ಸ್ ಮಂಡಲಹಾವಿನ ವಿಷಗ್ರಂಥಿಗಳು ಹಾಗೂ ವಿಷದಂತಗಳು ಬಹು ದೊಡ್ಡವು. ರಸೆಲ್ಸ್ ಮಂಡಲಹಾವಿನ ಕಡಿತದ ತೀವ್ರ ಪರಿಣಾಮಕ್ಕೆ ಅವೇ ಕಾರಣ. ರಸೆಲ್ಸ್ ಮಂಡಲಹಾವಿನ ಕಡಿತದ ಲಕ್ಷಣಗಳು ಹೀಗಿವೆ:–

1. ತಕ್ಷಣ ಉಂಟಾಗುವ ಹಾಗೂ ಒಂದೇ ಸಮನೆ ಮುಂದುವರಿಯುವ ತೀಕ್ಷ್ಣವಾದ ನೋವು.
2. ಬಾವು ಬೇಗ ಬರುತ್ತದೆ, ಕೆಲವೊಮ್ಮೆ ಎರಡು ಗಂಟೆಗಳೊಳಗೆ ಊತ ಉಂಟಾಗುತ್ತದೆ.
3. ಹಾವು ಕಚ್ಚಿರುವ ಕೈ ಕಾಲು ಪೇಲವವಾಗಿ, ಚರ್ಮ ಬಣ್ಣಕಳೆದುಕೊಂಡಂತೆ ಕಾಣುತ್ತದೆ ಹಾಗೂ ಬೊಬ್ಬೆಗಳು ಮೂಡುತ್ತವೆ.
4. ಓಕರಿಕೆ, ಸುಸ್ತು ಹಾಗೂ ಕ್ಷೋಭೆ ಉಂಟಾಗುತ್ತದೆ.
5. ಉಗುಳು, ವಾಂತಿ, ಮೂತ್ರ ಹಾಗೂ ಮಲದಲ್ಲಿ ರಕ್ತ ಕಂಡುಬರುತ್ತದೆ.
6. ದೃಷ್ಟಿ ಹಾಗೂ ಉಸಿರಾಟದ ತೊಂದರೆ ಉಂಟಾಗುವುದು.
7. ರಕ್ತದ ನಷ್ಟ; 24 ಗಂಟೆಗಳ ನಂತರ ಮೂತ್ರಪಿಂಡಗಳ ಕಾರ್ಯ ಸ್ಥಗಿತವಾಗುವುದು.

*ಗರಗಸ ಪುರುಪೆಯ ಮಂಡಲ :*

ಈ ಚಿಕ್ಕಹಾವಿಗೆ ದೊಡ್ಡದಾಗಿರುವ ವಿಷದಂತಗಳಿವೆ. ಆದರೆ ವಿಷದಂತಗಳು ಸುಲಭವಾಗಿ ಬೂಟುಗಳ ಚರ್ಮ ಅಥವಾ ಬಟ್ಟೆಗಳಿಗೆ ಸಿಕ್ಕಿ ಬಾಗಿಬಿಡುತ್ತವೆ. ಇದರ ವಿಷ ರಸೆಲ್ಸ್ ಮಂಡಲ ಹಾವಿಗಿಂತ ವಿಷಕಾರಿ ಹಾಗೂ ಇದಕ್ಕೆ ರಕ್ತವನ್ನು ಹೆಪ್ಪುಗಟ್ಟಿಸುವ ಗುಣ ಹೆಚ್ಚಿದೆ. ಅದೃಷ್ಟವಶಾತ್ ಈ ಹಾವು ಚುಚ್ಚುವ ವಿಷದ ಪ್ರಮಾಣವು ಸಾಮಾನ್ಯವಾಗಿ ಕಡಿಮೆ. ಗರಗಸ ಪುರುಪೆಯ ಮಂಡಲಹಾವುಗಳ ತೀವ್ರವಾದ ಕಡಿತದಿಂದ ಉಂಟಾಗುವ ಸಾಮಾನ್ಯ ಚಿಹ್ನೆಗಳು ಹೀಗಿವೆ:–

1. ಉರಿಯುವ ನೋವು (ಸ್ವಲ್ಪವೇ ಇರಬಹುದು). ಅನಂತರ ಕೈಕಾಲುಗಳ ಸಂದುಗಳಲ್ಲಿ ನೋವು ಕಾಣಿಸಿಕೊಳ್ಳುತ್ತದೆ.
2. ಎರಡು ಗಂಟೆಗಳೊಳಗೆ ಬಾವು, ಕೆಲವೊಮ್ಮೆ ಹೆಚ್ಚಿನ ಊತ ಉಂಟಾಗುತ್ತದೆ. ಕಾಲುಗಳಿಗೆ ಕಚ್ಚಿಸಿಕೊಂಡ ವ್ಯಕ್ತಿಯು ಅನಂತರ ನಡೆದಿದ್ದರೆ ಅಥವಾ ಓಡಿದ್ದರೆ ಅತಿ ಹೆಚ್ಚಿನ ಊತ ಉಂಟಾಗುತ್ತದೆ.



ರಸೆಲ್ಸ್ ಮಂಡಲ ಹಾವಿನ ಉದ್ದವಾದ, ಟೊಳ್ಳಿರುವ ಹಾಗೂ ಮಡಿಚಿಕೊಳ್ಳುವ ವಿಷದಂತ.
ಇದು ನಿಸರ್ಗದ ಚುಚ್ಚುವ ಸೂಜಿ.



ವಿಷದ ಹಾವಿನ ತೀವ್ರವಾದ ಕಡಿತಕ್ಕೆ ಪರಿಣಾಮಕಾರಿಯಾದ ಏಕೈಕ ಚಿಕಿತ್ಸೆ. ಹಾಪ್‌ಕಿನ್ ಪ್ರತಿವಿಷದ ಲಸಿಕೆಯನ್ನು ಇಂಜೆಕ್ಷನ್ ಮೂಲಕ ಅಭಿಧಮನಿಗಳ ರಕ್ತಕ್ಕೆ ಸೇರಿಸುವುದು.

3. ವಸಡುಗಳಿಂದ, ಗಾಯಗಳಿಂದ ರಕ್ತ ಸೋರುವುದು. ಮೂತ್ರದಲ್ಲಿ ರಕ್ತ ಕಾಣಿಸಿಕೊಳ್ಳುತ್ತದೆ.
4. 12 ರಿಂದ 24 ಗಂಟೆಗಳ ನಂತರ ಆಂತರಿಕ ರಕ್ತಸ್ರಾವದ ಚಿಹ್ನೆಗಳು ಕಾಣಿಸಿಕೊಳ್ಳುತ್ತವೆ.
5. ರಕ್ತಹೀನತೆ, ರಕ್ತದ ಕೊರತೆಯಿಂದ ಸುಸ್ತು, ಹೃದಯ ಸ್ಥಂಭನವಾಗಲೂಬಹುದು.

ಸೂಚನೆ : ಬಿಗಿಯಾದ ಗಂಟಿನಿಂದ ಬಾವುಂಟಾಗಬಹುದು, ರಕ್ತದ ಚಲನೆಯನ್ನು ನಿಲ್ಲಿಸುವುದರಿಂದ ಈ ಬಾವು ಉಂಟಾಗುತ್ತದೆ. ಇದನ್ನು ಮುಟ್ಟಿದಾಗ ತಣ್ಣಗಿರುತ್ತದೆ. ಆದರೆ ವಿಷದ ಪರಿಣಾಮದಿಂದ ಉಂಟಾದ ಬಾವನ್ನು ಮುಟ್ಟಿದಾಗ ಬೆಚ್ಚಗಿರುತ್ತದೆ.

## ವಿಷದ ಲಸಿಕೆ

ಹಾವಿನ ವಿಷವನ್ನು ನಿಷ್ಕ್ರಿಯಗೊಳಿಸುವ ಲಸಿಕೆಯನ್ನು ಪ್ರತಿವಿಷ ಅಥವಾ ಆಂಟಿವೆನಿಸ್ ಎಂದು ಕರೆಯುತ್ತಾರೆ. ಇದನ್ನು ಮುಂಬಯಿಯ ಹಾಫ್ಕಿನ್ ಸಂಸ್ಥೆಯು ಕುದುರೆಗಳನ್ನು ವಿನಾವಣೆ(ಇಮ್ಯೂನೈಜಿಂಗ್) ಮಾಡುವ ಮೂಲಕ ಸಿದ್ಧಗೊಳಿಸುತ್ತದೆ. ಭಾರತದಲ್ಲಿನ ನಾಲ್ಕು ಜಾತಿಯ ವಿಷದ ಹಾವುಗಳ ವಿಷದ ಮಿಶ್ರಣವನ್ನು (ಹೆಚ್ಚು ಸಾರರಿಕ್ತವಾದ) ಕುದುರೆಗಳಿಗೆ ಚುಚ್ಚುತ್ತಾರೆ ಹಾಗೂ ನಿಧಾನವಾಗಿ ಚುಚ್ಚುವ ವಿಷದ ಪ್ರಮಾಣವನ್ನು ಹೆಚ್ಚಿಸುತ್ತಾ ಹೋಗುತ್ತಾರೆ. ಕುದುರೆಯು ಒಂದು ನಿರ್ದಿಷ್ಟ ಮಟ್ಟದಲ್ಲಿ ವಿನಾವಣೆ ತಲುಪಿದ ಮೇಲೆ, ಅದರ ಸ್ವಲ್ಪ ರಕ್ತವನ್ನು ಹೊರ ತೆಗೆಯಲಾಗುತ್ತದೆ. ರಕ್ತವನ್ನು ತಿರುಗಣೆಯಲ್ಲಿ ತಿರುಗಿಸಿ ರಕ್ತಕಣಗಳು ತಳಸೇರುವಂತೆ ಮಾಡಿ, ಲಸಿಕೆಯನ್ನು (ರಕ್ತದ ದ್ರವದ ಅಂಶ) ಬೇರ್ಪಡಿಸುತ್ತಾರೆ ಮತ್ತು ಲಸಿಕೆಯನ್ನು ಒಣಗಿಸಿ ಗಟ್ಟಿಯಾಗಿಸುತ್ತಾರೆ. ಅನಂತರ ಅದನ್ನು ಪರೀಕ್ಷಿಸಿ 10 ಮಿ.ಲೀ ಪ್ರಮಾಣದ ಪ್ಯಾಕೆಟ್ಟುಗಳನ್ನು ಸಿದ್ಧಗೊಳಿಸುತ್ತಾರೆ. ಭಾರತದ ನಾಲ್ಕು ಪ್ರಮುಖ ವಿಷದ ಹಾವುಗಳ ವಿಷಕ್ಕೆ ಈ ಪ್ರತಿವಿಷದ ಲಸಿಕೆಯು ಪರಿಣಾಮಕಾರಿ. ಹಿಮಾಚಲ ಪ್ರದೇಶದ ಕೌಶಲಿಯಲ್ಲಿರುವ ಕೇಂದ್ರ ಸಂಶೋಧನಾ ಸಂಸ್ಥೆಯಲ್ಲಿಯೂ ಪ್ರತಿವಿಷವನ್ನು ತಯಾರಿಸುತ್ತಾರೆ.

ಶೈತ್ಯೀಕರಣವಿಲ್ಲದೆ ಪ್ರತಿವಿಷವನ್ನು ಐದು ವರ್ಷಗಳವರೆಗೆ ಇಟ್ಟುಕೊಳ್ಳಬಹುದು. ಹಾವುಗಳು ಹೆಚ್ಚು ಇರುವ ಎಲ್ಲ ಗ್ರಾಮೀಣ ಪ್ರದೇಶಗಳಲ್ಲಿಯೂ ಪ್ರತಿವಿಷವನ್ನು ಸಂಗ್ರಹಿಸಿ ಇಟ್ಟಿರಲೇಬೇಕು. ಕುದುರೆಯ ಲಸಿಕೆಯು ಕೆಲವರಿಗೆ ತೀವ್ರವಾದ ಅಲರ್ಜಿ ಉಂಟುಮಾಡುತ್ತದೆ. ಆದ್ದರಿಂದ ಹಾವು ಕಚ್ಚಿಸಿಕೊಂಡ ವ್ಯಕ್ತಿಗಳಿಗೆ ಮೊದಲು ಟೆಸ್ಟ್‌ಡೋಸ್ ಇಂಜೆಕ್ಷನ್ (ಪರೀಕ್ಷಿಸಲು ನೀಡುವ ಅತ್ಯಲ್ಪ ಪ್ರಮಾಣದ ಚುಚ್ಚುಮದ್ದು) ನೀಡಬೇಕು. (ಅಡ್ರಿನಲಿನ್ ಸಿದ್ಧಪಡಿಸಿಕೊಂಡಿರಬೇಕು). ಈ ಲಸಿಕೆಯಿರುವ ಪ್ರತಿ ಕಿಟ್‌ನಲ್ಲಿಯೂ ಪ್ರತಿವಿಷವನ್ನು ಹೇಗೆ ಬಳಸಬೇಕೆಂಬುದರ ಬಗ್ಗೆ ವಿವರವಾದ ಸೂಚನೆಗಳಿರುತ್ತವೆ. ಜೀವ ಉಳಿಸುವ ಈ ಲಸಿಕೆಯ ಬಳಕೆಯ ಬಗ್ಗೆ ಪ್ರಚಾರ ನೀಡಿದ್ದೇ ಆದರೆ ಹಾವುಗಳ ಕಡಿತದಿಂದ ಉಂಟಾಗುವ ಸಾವುಗಳನ್ನು ತುಂಬ ಕಡಿಮೆ ಮಾಡಬಹುದು.

## ನಾಟಿ ಚಿಕಿತ್ಸೆಗಳು

ಪ್ರಾಚೀನ ಕಾಲದಲ್ಲಿ ಹಾವು ಕಚ್ಚುವುದನ್ನು ವಿಧಿಯ ಅಥವಾ ದೇವರುಗಳ ಕೈವಾಡವೆಂದು ಪರಿಗಣಿಸಲಾಗುತ್ತಿತ್ತು. ಇಂದಿಗೂ ಹಾವು ಕಚ್ಚಿದಾಗ ಅನೇಕ ಪ್ರದೇಶಗಳಲ್ಲಿ ಜನರು ಅದನ್ನು ಹಣೆಬರಹವೆಂದು ಹೇಳಿ ಮೌಢ್ಯ ತುಂಬಿರುವ ಭಯವನ್ನು ವ್ಯಕ್ತಪಡಿಸುತ್ತಾರೆ. ಖೊಟ್ಟಿ ವೈದ್ಯರು ಹಾಗೂ ಮಂತ್ರ ಮಾಟ ಮಾಡುವ ನಾಟಿ ವೈದ್ಯರು ಹಾವಿನ ಕಡಿತಕ್ಕೆ ನಾನಾ ರೀತಿಯ 'ಚಿಕಿತ್ಸಾ ವಿಧಾನ'ಗಳನ್ನು ವಿಧಿಸಿ ಹಣ ಹಾಗೂ ಹೆಸರುಗಳಿಸಿದ್ದಾರೆ. ಇಂತಹವರು ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಜಗತ್ತಿನ ಎಲ್ಲ ಪ್ರದೇಶಗಳಲ್ಲಿಯೂ ಒಂದಲ್ಲ ಒಂದು ರೀತಿಯ ನಾಟಿ ಔಷಧೋಪಚಾರ ನೀಡುವ ಜನರಿದ್ದಾರೆ. ನಮ್ಮ ದೇಶದಲ್ಲಿ ಹಾವಿನ ಕಡಿತಕ್ಕೆ ನಾಟಿ ಚಿಕಿತ್ಸೆ ಮಾಡುವ ನಾಲ್ಕು ವಿಧಾನಗಳಿವೆ.

(ಅ) ಮಂತ್ರ ಚಿಕಿತ್ಸೆ :

ಹಾವು ಕಡಿತವನ್ನು ವಾಸಿಮಾಡುವ ವಿಶೇಷ ಚಿಕಿತ್ಸಕ ಅಥವಾ ತನಗೆ ವಿಶೇಷ ಶಕ್ತಿಯಿದೆ ಎಂದು ನಂಬಿದ ಧಾರ್ಮಿಕ ವ್ಯಕ್ತಿ ಹಾಗೂ ಹಾವಿನ ಕಡಿತಕ್ಕೆ ಚಿಕಿತ್ಸೆ ನೀಡಿ ಸ್ವಲ್ಪ ಮಟ್ಟಿನ 'ಯಶಸ್ಸು' ಪಡೆದಿರುವ ಹೆಸರುವಾಸಿ ವ್ಯಕ್ತಿಯು ಮಂತ್ರ ಚಿಕಿತ್ಸೆ ನೀಡಬಹುದು. ಬಹುತೇಕ ಹಾವಿನ ಕಡಿತಗಳು ಸಾವುಂಟುಮಾಡುವುದಿಲ್ಲ. ಹೀಗಾಗಿಯೇ ಮಂತ್ರ ಚಿಕಿತ್ಸೆಗೆ ಹೆಚ್ಚಿನ ಪ್ರಮಾಣದ ಯಶಸ್ಸು ದೊರಕಿದೆ. ಅಪರೂಪಕ್ಕೆ ನಿಜವಾದ ವಿಷದ ಹಾವು ತೀವ್ರವಾಗಿ ಕಚ್ಚಿ ಸಾವು ಸಂಭವಿಸಿದಾಗ, ವ್ಯವಹಾರ ಚತುರನಾದ ಮಾಂತ್ರಿಕನು ಅಪರೂಪವಾದ ಸಾವನ್ನು ಎಲ್ಲರೂ ಒಪ್ಪುವಂತೆ ವಾದಿಸಿ, ಸುಲಭವಾಗಿ ತಪ್ಪಿಸಿಕೊಳ್ಳುತ್ತಾನೆ.

(ಆ) ಸ್ಟೇಷನ್ ಮಾಸ್ತರ್ :

ಈ ಕಥೆ ಹೇಗೆ ಪ್ರಾರಂಭವಾಯಿತೋ ಗೊತ್ತಿಲ್ಲ. ಆದರೆ ಎಲ್ಲ ಕಡೆಯೂ ಜನಜನಿತವಾಗಿರುವ ಹಾಗೂ ಹಲವಾರು ತಲೆಮಾರುಗಳಿಂದ ನಂಬಿರುವ ಈ ವದಂತಿ ಹರಡುತ್ತಲೇ ಇದೆ. ಹಾವು ಕಚ್ಚಿದಾಗ ಟೆಲಿಗ್ರಾಂ ಅಥವಾ ಫೋನ್ ಮೂಲಕ ವಿಷಯವನ್ನು ರೈಲ್ವೆ ನಿಲ್ದಾಣದ ರೈಲ್ವೆ ಮಾಸ್ತರಿಗೆ ತಿಳಿಸಿದರೆ ಸಾಕು. ಆತ ಮತ್ತೆ ಫೋನು ಮಾಡುವಷ್ಟರಲ್ಲಿ ಹಾವು ಕಚ್ಚಿಸಿಕೊಂಡ ವ್ಯಕ್ತಿ ಗುಣಹೊಂದುತ್ತಾನೆ. ನಾವು ಈ ಸ್ಟೇಷನ್ ಮಾಸ್ತರ್ ಯಾರೆಂಬುದನ್ನು ತಿಳಿಯುವುದಕ್ಕೆ ಎಲ್ಲಿಲ್ಲದ ಪ್ರಯತ್ನ ಪಟ್ಟೆವು. 1900ರ ಮೊದಲ ದಶಕಗಳಲ್ಲಿ ಇದ್ದರೆಂದು ಹೇಳುತ್ತಾರೆ. ಆದರೆ ನಮಗೆ ಇದುವರೆವಿಗೆ ಸಿಕ್ಕಿಲ್ಲ. ವಿಷವಲ್ಲದ ಹಾವಿನ ಕಡಿತಗಳಿಗೆ ನೀಡುವ ಮಾನಸಿಕ 'ಚಿಕಿತ್ಸೆ'ಗಳಲ್ಲಿ ಇದೂ ಸಹ ಒಂದು ವಿಧಾನ.

(ಇ) ಹಾವಿನ ಕಲ್ಲುಗಳು :

ಹಾವಿನ ಕಡಿತಕ್ಕೆ ಶ್ರೀಲಂಕ ಮತ್ತು ಕೇರಳದಲ್ಲಿ ಹಿಂದಿನ ಕಾಲದಲ್ಲಿ ನೀಡುತ್ತಿದ್ದ ಜನಪ್ರಿಯ ಚಿಕಿತ್ಸೆಗಳಲ್ಲಿ ಹಾವಿನ ಕಲ್ಲಿನ ಚಿಕಿತ್ಸೆಯೂ ಸೇರಿದೆ. ಹೊಳಪು ನೀಡಿದ ಪುಟ್ಟ ಮೂಳೆಯ ತುಂಡುಗಳೇ ಹಾವಿನ ಕಲ್ಲುಗಳು. ಹಾವು ಕಚ್ಚಿದ ಸ್ಥಳದಲ್ಲಿ ಈ ಕಲ್ಲನ್ನು ಇಡುತ್ತಾರೆ. ಇದು 'ವಿಷವನ್ನು ಹಿಂದಕ್ಕೆ ಹೀರಿಕೊಳ್ಳುತ್ತದೆ' ಅನಂತರ ಕಲ್ಲನ್ನು ಹಾಲಿಗೆ ಹಾಕಿದಾಗ 'ವಿಷ ಹೊರಗೆ ಬಂದು' ಕಲ್ಲು ಶುದ್ಧವಾಗುತ್ತದೆ. ಭಾರತದಲ್ಲಿ ಈ ಹಾವಿನ ಕಲ್ಲುಗಳನ್ನು ಅಲೆಮಾರಿ ಹಾವಾಡಿಗರು ಮಾರುತ್ತಾರೆ. ಶ್ರೀಲಂಕಾದ ಎಲ್ಪಿಟಿಯಾದಲ್ಲಿ ಹಾವಿನ ಕಲ್ಲುಗಳನ್ನು ಮಾರಾಟ ಮಾಡುವ ಅಂಗಡಿಯೇ ಇದೆ. ಊತಕಗಳೊಳಗೆ ವಿಷ ಆಳವಾಗಿ ನಾಟಿರುವಾಗ ಈ ವಿಧಾನದಿಂದ ಯಾವ ಉಪಯೋಗವೂ ಇಲ್ಲ. ಆದರೆ ಹಾವಿನ ಕಲ್ಲುಗಳ ಮಾರಾಟದಿಂದ ಹಾವಾಡಿಗರು ಹೆಚ್ಚು ಹಣ ಗಳಿಸಿಕೊಳ್ಳುತ್ತಾರೆ. ಹಾವಿನ ಕಡಿತಕ್ಕೆ ಸರಿಯಾದ ಚಿಕಿತ್ಸೆಯೆಂದು ಮೊದಲಿಗೆ ಹೇಳಲಾಗುತ್ತಿದ್ದ 'ಕತ್ತರಿಸುವ ಹಾಗೂ ಹೀರುವ ವಿಧಾನವು' ವಾಸ್ತವವಾಗಿ ಅನೇಕ ವೇಳೆ ಉತ್ತಮವಾದ ವಿಧಾನವೇನಲ್ಲ. ಮಂಡಲ ಹಾವು ಕಚ್ಚಿದಾಗ ಈ ಚಿಕಿತ್ಸಾ ವಿಧಾನ ಅನುಸರಿಸಿದರೆ, ಹಾವು ಕಚ್ಚಿದ ಜಾಗದಲ್ಲಿ ಆಳವಾಗಿ ಕತ್ತರಿಸುವುದರಿಂದ ರಕ್ತ ಒಂದೇ ಸಮನೆ ಹೊರಕ್ಕೆ ಹರಿದು ವ್ಯಕ್ತಿ ಸಾಯಬಹುದು. ವಿಷದ ಹಾವಿನ ಕಡಿತವನ್ನು ಖಚಿತವಾಗಿ ಗುಣಪಡಿಸಬಲ್ಲ ಪ್ರತಿವಿಷ ದೊರಕುವಾಗ ಅನಗತ್ಯವಾಗಿ ನಾಟಿ ಚಿಕಿತ್ಸಾ ವಿಧಾನಗಳಿಗೆ ಹಾಗೂ ತೀರ ಹಳೆಯ ವೈದ್ಯಕೀಯ ಪ್ರಯತ್ನಗಳಿಗಾಗಿ ಕಾಲವ್ಯಯ ಮಾಡಬಾರದು.

(ಈ) ಔಷಧಗಳು :

ಚಿನ್ನದ ಕ್ಲೋರೈಡ್ ಅಂಶವಿರುವ ಲೆಕ್ಸಿನ್ ಎಂಬ ಔಷಧ ಹಾಗೂ ಪಾದ್ರಿ ಮುಲ್ಲರ್ ಔಷಧಾಲಯದ ತಿರಿಯಾಕ್(Tiriyaq) ಎಂಬ ಔಷಧಗಳು ಹೆಚ್ಚು ಪ್ರಚಾರದಲ್ಲಿರುವ ಔಧಗಳು. ಐವತ್ತಕ್ಕಿಂತ ಹೆಚ್ಚಿನ ವರ್ಷಗಳಿಂದ ಈ ಔಷಧಗಳು ಮಾರುಕಟ್ಟೆಯಲ್ಲಿವೆ. ಪ್ರನಾಳಗಳಲ್ಲಿ ಹಾವಿನ ವಿಷವನ್ನು ಕೆಲವು ರಾಸಾಯನಿಕಗಳು ನಿಷ್ಕ್ರಿಯಗೊಳಿಸುತ್ತವೆ. ಆದರೆ ಹಾವಿನ ವಿಷ ಪ್ರಾಣಿಯ ಅಥವಾ ಮನುಷ್ಯನ ಶರೀರಕ್ಕೆ ಚುಚ್ಚಲ್ಪಟ್ಟಾಗ ವಿಷವು ಒಂದೇ ಸ್ಥಳದಲ್ಲಾಗಲಿ ಅಥವಾ ಅದೇ ಸ್ಥಿತಿಯಲ್ಲಾಗಲಿ ಇರುವುದಿಲ್ಲ. ಆದ್ದರಿಂದ ವಿಷವನ್ನು ನಿಷ್ಕ್ರಿಯಗೊಳಿಸುವುದು ಕಷ್ಟದ ಕೆಲಸ. ಗ್ರಾಮೀಣ ಭಾರತದಲ್ಲಿ ಪ್ರತಿವಿಷ ದೊರಕದೆ ಇದ್ದಾಗ ಈ ರೀತಿಯ ಔಷಧಗಳು ಜನಪ್ರಿಯವಾದುದು ಸಹಜ. ಆದರೆ ತೀವ್ರವಾದ ಹಾವಿನ ಕಡಿತಕ್ಕೆ ಅನುಮತಿಸಿದ ಪ್ರತಿವಿಷ ಲಸಿಕೆಯ ಚಿಕಿತ್ಸೆಯ ಬದಲು, ಇಂತಹ ಬೇರೆ ಯಾವುದೇ ಚಿಕಿತ್ಸೆ ನೀಡುವುದನ್ನು ಅಪರಾಧ ಹಾಗೂ ಅಪಾಯಕಾರಿ ಎಂದು ಪರಿಗಣಿಸಲೇಬೇಕು.

(ಉ) ಗಿಡಮೂಲಿಕೆ ಚಿಕಿತ್ಸೆ :

ಹಾವಿನ ಕಡಿತಕ್ಕೆ ಔಷಧಿಯೆಂದು ಪುಡಿಮಾಡಿದ ಎಲೆಗಳನ್ನು ಮತ್ತು ಬೇರುಗಳನ್ನು

ಹಾವಾಡಿಗರು ಹಾಗೂ ಮತ್ತಿತರರು ಮಾರಾಟ ಮಾಡಿ ಸಾಕಷ್ಟು ಹಣ ಮಾಡುತ್ತಾರೆ. ಹಾವಾಡಿಗರಂತೂ ಸಾಮಾನ್ಯವಾಗಿ ಶುದ್ಧ ಮೋಸಗಾರರು. ಅವರಿಗೇ ವಿಷದ ಹಾವು ಕಡಿದರೆ ಪ್ರತಿವಿಷ ಚಿಕಿತ್ಸೆಗಾಗಿ ಮೊದಲು ಆಸ್ಪತ್ರೆಗೆ ಓಡಿಬರುತ್ತಾರೆ. ಆದರೆ ಹಾವುಗಳನ್ನು ಹಿಡಿದು ಜೀವನ ನಡೆಸುವ ವಿವಿಧ ಬುಡಕಟ್ಟು ಜನಾಂಗಗಳ ಜನರು ಹಾವಿನ ಕಡಿತಕ್ಕೆ ಸ್ವಲ್ಪಮಟ್ಟಿನ ಪ್ರಭಾವ ಬೀರುವ ಗಿಡಮೂಲಿಕೆ ಔಷಧವನ್ನು ಅಭಿವೃದ್ಧಿ ಪಡಿಸಿದ್ದಾರೆ ಮತ್ತು (ತಮ್ಮ ಮೇಲೆಯೇ) ಪ್ರಯೋಗಿಸಿಕೊಂಡಿದ್ದಾರೆ. ಹಾವುಗಳನ್ನು ಹಿಡಿಯುವ ತಮಿಳುನಾಡಿನ ಇರುಳ ಜನರು ಹಾವಿನ ಕಡಿತಕ್ಕೆ ಅನೇಕ ಸಂಕೀರ್ಣ ಹಾಗೂ ನಿರ್ದಿಷ್ಟವಾದ ಗಿಡಮೂಲಿಕೆ ಔಷಧಗಳನ್ನು ಹೊಂದಿದ್ದಾರೆ. ಎಲ್ಲಾ ಚಿಕಿತ್ಸೆಗಳಿಗೂ ಅವರು ಸಾಮಾನ್ಯವಾಗಿ ಬಳಸುವ ಔಷಧವೆಂದರೆ ಕೆಲವು ಗಿಡಗಳ ಅತಿ ಕಹಿಯಿರುವ ಎಲೆ ಮತ್ತು ಬೇರುಗಳು. ಹಾವಿನ ವಿಷವೇರಿದ್ದರೆ, ಕಹಿಯಿರುವ ಗಿಡಮೂಲಿಕೆ ಆ ವ್ಯಕ್ತಿಗೆ ಸಿಹಿಯಾಗಿ ತೋರುವುದಂತೆ. ಆಗ ಹಾವು ಕಚ್ಚಿಸಿಕೊಂಡಿರುವ ವ್ಯಕ್ತಿಗೆ ಗಿಡಮೂಲಿಕೆಯ ಚಿಕಿತ್ಸಾ ಪ್ರಮಾಣವನ್ನು ಮತ್ತೆ ಮತ್ತೆ ಕೊಡುತ್ತಾ ಹೋಗುತ್ತಾರೆ. ಇದನ್ನು ಆ ವ್ಯಕ್ತಿ ಕಹಿ ರುಚಿ ಪಡೆಯುವವರೆಗೂ ಮುಂದುವರೆಸುತ್ತಾರೆ. ಹೆಚ್ಚೂ ಕಡಿಮೆ ಪ್ರತಿಯೊಬ್ಬ ಇರುಳನೂ ಹಾವಿನ ಕಡಿತಕ್ಕೆ ಬೇಕಾದ ಗಿಡಮೂಲಿಕೆಗಳ ಚಿಕ್ಕ ಚೀಲವೊಂದನ್ನು ತನ್ನ ಜೊತೆಯಲ್ಲಿಟ್ಟುಕೊಂಡಿರುತ್ತಾನೆ. ತುಂಬ ತೀವ್ರವಾದ ಹಾವಿನ ಕಡಿತಕ್ಕೆ ತುರ್ತು ಕ್ರಮಗಳನ್ನು ಕೈಗೊಳ್ಳುತ್ತಾರೆ. ಅದಕ್ಕಾಗಿ ಅವರು ತಲೆಯ ನೆತ್ತಿಯ ಭಾಗದ ಚರ್ಮವನ್ನು ಕತ್ತರಿಸುತ್ತಾರೆ ಮತ್ತು ಪುಡಿ ಮಾಡಿದ ಗಿಡಮೂಲಿಕೆ ಔಷಧವನ್ನು ಹಾಕಿ ತಿಕ್ಕುತ್ತಾರೆ (ವಿನಾವಣಿ) ಅಥವಾ ಬೀಡಿಯ ರೀತಿ ಸುರುಳಿಸುತ್ತಿ (ಎಲೆಗಳ ಸಿಗರೇಟು) ತುರ್ತು ಪರಿಣಾಮ ಪಡೆಯುವ ಉದ್ದೇಶದಿಂದ ಹೊಗೆ ಸೇದಲು ಕೊಡುತ್ತಾರೆ. ಹಾವು ಕಚ್ಚಿದಾಗ ಹಾಗೂ ವಾಸಿಯಾದ ನಂತರ ಉಂಟಾಗುವ ನೋವು, ಬಾವು, ಓಕರಿಕೆ ಹಾಗೂ ಇತರೆ ಪರಿಣಾಮಗಳಿಗೆ ಇರುಳರು ವಿವಿಧ ರೀತಿಯ ಚಿಕಿತ್ಸೆಯನ್ನು ಹಾಗೂ ಆಹಾರ ಪಥ್ಯವನ್ನು ನೀಡುತ್ತಾರೆ. ಗಿಡಮೂಲಿಕೆಗಳ ಈ ಚಿಕಿತ್ಸಾ ವಿಧಾನಗಳನ್ನು ವೈದ್ಯಕೀಯವಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಇರುಳರಿಗೆ ಹಾವುಗಳ ಪ್ರಕೃತಿ, ಸ್ವಭಾವಗಳ ಬಗ್ಗೆ ಪೂರ್ಣವಾದ ಹಾಗೂ ಸ್ಪಷ್ಟವಾದ ಜ್ಞಾನವಿದೆ. ಆದ್ದರಿಂದ ಇವರು ಬಳಸುವ ಔಷಧಗಳ ಅಧ್ಯಯನದಿಂದ ಕುತೂಹಲಕಾರಿಯಾದ ಕೆಲವು ಸಂಗತಿಗಳು ಹೊರಬೀಳುತ್ತದೆಂಬುದು ನಮ್ಮ ಧೃಡ ನಂಬಿಕೆ.

**ಹಾವು ಕಚ್ಚಿದ ಅಂಕಿ – ಅಂಶಗಳು :**

ಭಾರತದಲ್ಲಿ ಹಾವು ಕಚ್ಚುವುದರಿಂದ ಎಷ್ಟು ಜನ ಸಾಯುತ್ತಾರೆಂಬ ಬಗ್ಗೆ ವಾಸ್ತವವಾದ ಅಂಕಿ–ಸಂಖ್ಯೆಗಳಿಲ್ಲ. ಆದರೆ ಪ್ರತಿವರ್ಷ 6000 ದಿಂದ 9000 ಜನ ಸಾಯಬಹುದೆಂದು ಅಂದಾಜು ಮಾಡಬಹುದು. ಈ ಅಂದಾಜಿನಿಂದಲೇ ಪ್ರತಿವಿಷದ ಬಗ್ಗೆ ಹೆಚ್ಚು ಪ್ರಚಾರ ನೀಡುವ ಅಗತ್ಯವಿದೆಯೆಂದು ತಿಳಿಯುತ್ತದೆ. ಈ ಸಂಖ್ಯೆಯು ಅಮೆರಿಕಾದಲ್ಲಿ ಕಾರುಗಳ ಅಪಘಾತದಿಂದ ಉಂಟಾಗುವ ಸಾವುಗಳ ಐದನೇ ಒಂದರಷ್ಟಿದೆ ಹಾಗೂ ಭಾರತದಲ್ಲಿ ನಾಯಿ ಕಡಿತದಿಂದ ಉಂಟಾಗುವ ಸಾವುಗಳ ಮೂರನೇ ಒಂದರಷ್ಟಿದೆ.

ಇತ್ತೀಚೆಗೆ ಹಾವು ಕಡಿತಗಳ ಬಗ್ಗೆ 1972ರಲ್ಲಿ ಟೋಕಿಯೋ ವಿಶ್ವವಿದ್ಯಾಲಯದ ಡಾ.ಯೋಶಿಯೋ ಸವಾಯ್ ಮತ್ತು ಡಾ ಎಂ. ಹೋಮ ಅಧ್ಯಯನ ಮಾಡಿದ್ದಾರೆ. ತಮ್ಮ ಇತ್ತೀಚಿನ ಪತ್ರದಲ್ಲಿ ಡಾ. ಸವಾಯ್ ಈ ಕೆಲವು ಮಾಹಿತಿಗಳನ್ನು ನೀಡಿದ್ದಾರೆ. ಭಾರತದ ಸರಕಾರಿ ಆಸ್ಪತ್ರೆಗಳ ಅಂಕಿ–ಅಂಶಗಳ ಪ್ರಕಾರ 1969ರಲ್ಲಿ ಒಟ್ಟು 21,519 ಜನರಿಗೆ ಹಾವು ಕಚ್ಚಿದ್ದಕ್ಕೆ ಚಿಕಿತ್ಸೆ ನೀಡಲಾಯಿತು. ಅದರಲ್ಲಿ 1,091 ಜನ ಸಾವನ್ನಪ್ಪಿದರು(ಪ್ರತಿ ಶತ 5 ಅಥವಾ 20ರಲ್ಲಿ ಒಬ್ಬರು). ಈ ಅಂಕಿ–ಅಂಶಗಳಲ್ಲಿ ಖಾಸಗಿ ಆಸ್ಪತ್ರೆಗಳ ಅಂಕಿ–ಅಂಶಗಳು ಸೇರಿಲ್ಲದಿರುವುದು ದುರದೃಷ್ಟದ ಸಂಗತಿ.

ಹಾವು ಕಚ್ಚಿದ್ದರಿಂದ 1969ರಲ್ಲಿ ಮಹಾರಾಷ್ಟ್ರ ರಾಜ್ಯವೊಂದರಲ್ಲಿಯೇ ಒಟ್ಟು 1,093 ಸಾವುಗಳುಂಟಾದವು. ಇವುಗಳಲ್ಲಿ ಹಾವು ಕಚ್ಚಿದ ವ್ಯಕ್ತಿಗಳನ್ನು ಆಸ್ಪತ್ರೆಗೆ ದಾಖಲಿಸದೆ ಉಂಟಾದ ಸಾವುಗಳು ಒಟ್ಟು 993 (ಪ್ರತಿಶತ 91). ಅದೇ ವರ್ಷ ಕೇರಳದಲ್ಲಿ ಹಾವು ಕಚ್ಚಿದ್ದರಿಂದ 264 ಸಾವುಗಳಾದವು. ಅವುಗಳಲ್ಲಿ 97 ಸಾವು ಆಸ್ಪತ್ರೆಗಳಲ್ಲಾದವು (ಪ್ರತಿಶತ 37). ಡಾ. ಸವಾಯ್ ಹೇಳುವಂತೆ ಭಾರತದಲ್ಲಿ ಒಂದು ವರ್ಷಕ್ಕೆ ಹಾವಿನ ಕಡಿತಕ್ಕೆ ಬಲಿಯಾಗುವ ಒಟ್ಟು ಜನರ ಸಂಖ್ಯೆ 2,00,000 ವೆಂದು ನಾವು ಲೆಕ್ಕಾಚಾರ ಮಾಡಿದರೆ, ಸಂಖ್ಯಾಶಾಸ್ತ್ರದ ಪ್ರಕಾರ ಅವರಲ್ಲಿ ಶೇಕಡಾ 10 ರಷ್ಟು ಜನ ಆಸ್ಪತ್ರೆಗೆ ಬರುತ್ತಾರೆ ಮತ್ತು ಹಾಗೆ ಬಂದವರಲ್ಲಿ ಶೇಕಡ 0.5 (1000) ರಷ್ಟು ಜನ ಸಾವಿಗೀಡಾಗುತ್ತಾರೆ. ಆದರೆ ಹಾವಿನ ಕಡಿತಕ್ಕೆ ಒಳಗಾದ ವ್ಯಕ್ತಿಗಳಲ್ಲಿ ಶೇಕಡ 90ರಷ್ಟು ಆಸ್ಪತ್ರೆಗೆ ಬರದೆ ಹೊರಗೆ 'ಮಂತ್ರ ಚಿಕಿತ್ಸೆ' ಹಾಗೂ ಗಿಡಮೂಲಿಕೆಗಳ ಔಷಧೋಪಚಾರ ಪಡೆಯುತ್ತಾರೆ ಹಾಗೂ 9000 ಜನ ಸಾವಿಗೊಳಗಾಗುತ್ತಾರೆ! ಆಸ್ಪತ್ರೆಯ ಹೊರಗೆ ಉಂಟಾಗುತ್ತಿರುವ ಅತಿ ಹೆಚ್ಚು ಹಾವಿನ ಕಡಿತದ ಸಾವುಗಳಿಗೆ ನಾಗರಹಾವುಗಳೇ ಕಾರಣವೆಂದು ಡಾ. ಸವಾಯ್ ಭಾವಿಸುತ್ತಾರೆ. ನಾಗರಹಾವು ಕಚ್ಚಿದಾಗ ಶೀಘ್ರವಾಗಿ ಕಂಡುಬರುವ ಲಕ್ವದ ಗುಣಲಕ್ಷಣಗಳೇ ಸಾವಿಗೆ ಕಾರಣವಾಗುತ್ತದೆ (ಗ್ರಾಮೀಣ ಪ್ರದೇಶದಿಂದ ಹಾವು ಕಚ್ಚಿಸಿಕೊಂಡ ವ್ಯಕ್ತಿಯು ಆಸ್ಪತ್ರೆ ತಲುಪುವ ಮೊದಲೇ ಸಾವುಂಟಾಗುತ್ತದೆ). ಹೆಚ್ಚು ಸಾವುಂಟುಮಾಡುವುದರಲ್ಲಿ ಎರಡನೆಯ ಸ್ಥಾನ ಕಡಂಬಳ ಹಾವಿಗೆ. ನಾಗರಹಾವು ಕಚ್ಚಿದಾಗ ವ್ಯಕ್ತವಾಗುವ ಚಿಹ್ನೆಗಳಿಗೂ ಮತ್ತು ಕಡಂಬಳ ಹಾವು ಕಚ್ಚಿದಾಗ ವ್ಯಕ್ತವಾಗುವ ಚಿಹ್ನೆಗಳಿಗೂ ನಡುವೆ ಇರುವ ವ್ಯತ್ಯಾಸಗಳನ್ನು ಕಚ್ಚಿಸಿಕೊಂಡ ವ್ಯಕ್ತಿಯಾಗಲಿ ಅಥವಾ ವೈದ್ಯರಾಗಲಿ ಗುರುತಿಸುವುದು ತೀರ ವಿರಳ (ಲಕ್ಷಣಗಳನ್ನು ನೋಡಿ). ವೈದ್ಯಕೀಯ ಚಿಕಿತ್ಸೆಯ ದೃಷ್ಟಿಯಿಂದ ಕೆಲವು ಪ್ರದೇಶಗಳಲ್ಲಿ ಮಂಡಲ ಹಾವುಗಳಿಗೆ ಪ್ರಾಮುಖ್ಯತೆಯಿದ್ದರೂ, ಅವುಗಳಿಂದ ಉಂಟಾಗುವ ಸಾವಿನ ಪ್ರಮಾಣ ಕಡಿಮೆ. ಮಂಡಲ ಕಡಿತದಿಂದ ಉಂಟಾಗುವ ಸಾವುಗಳಲ್ಲಿ ಅನೇಕವು ಆಸ್ಪತ್ರೆಗಳಲ್ಲಾಗುತ್ತವೆ. ಏಕೆಂದರೆ ಮಂಡಲ ಹಾವಿನಿಂದ ಕಚ್ಚಿಸಿಕೊಂಡವರು ಮೊದಲು ಬೇರೆಲ್ಲ ರೀತಿಯ ಔಷಧೋಪಚಾರಗಳನ್ನು ಪ್ರಯತ್ನಿಸಿ, ಹಲವು ದಿನಗಳ ನಂತರ ಕೊನೆಯ ಪ್ರಯತ್ನವಾಗಿ ಆಸ್ಪತ್ರೆಗೆ ಸೇರುತ್ತಾರೆ. ಅಷ್ಟು ಹೊತ್ತಿಗೆ ಮೂತ್ರಪಿಂಡ ನಾಶವಾಗಿ, ಆದರಿಂದ ಸಾವುಂಟಾಗುತ್ತದೆ. ಆಸ್ಪತ್ರೆಗೆ ದಾಖಲಾದ ವ್ಯಕ್ತಿಗಳಲ್ಲಿ ಕೇವಲ

6 ರಷ್ಟು ಜನರಿಗೆ ಯಾವ ಹಾವು ಕಚ್ಚಿದೆ ಎಂಬುದನ್ನು ಪತ್ತೆ ಹಚ್ಚಲಾಗಿದೆ. ಹಾವು ಕಚ್ಚಿದ ವ್ಯಕ್ತಿಗಳಿಗೆ ಪ್ರತಿವಿಷ ಚಿಕಿತ್ಸೆ ದೊರೆತದ್ದೇ ಆದರೆ ತುಂಬ ಕಡಿಮೆ ಸಾವುಗಳಾಗುತ್ತವೆ. ಆದ್ದರಿಂದ ಪ್ರತಿವಿಷ ಚಿಕಿತ್ಸೆಯ ಬಗ್ಗೆ ಪ್ರಚಾರ ನೀಡುವುದು ಮತ್ತು ಪ್ರತಿವಿಷ ಲಸಿಕೆಯು ಸರಿಯಾಗಿ ವಿತರಣೆಯಾಗುವಂತೆ ಮಾಡುವುದು ಅತ್ಯಂತ ಪ್ರಮುಖವಾದ ವಿಷಯ.

ವಿಷದ ಹಾವುಗಳಲ್ಲಿ ಈ ನಾಲ್ಕು ಹಾವುಗಳನ್ನು ಬಿಟ್ಟು ಮಿಕ್ಕ ವಿಷದ ಹಾವುಗಳು ಕಚ್ಚುವುದು ತುಂಬ ಅಪರೂಪ. ಅವುಗಳ ಪ್ರತಿವಿಷ ಲಸಿಕೆಯು ಲಭ್ಯವಿಲ್ಲ. ಆದರೆ ಥೈಲ್ಯಾಂಡ್ ದೇಶದ ಬ್ಯಾಂಕಾಕ್‌ನಲ್ಲಿರುವ ಕ್ವೀನ್ ಸೋವಾಭ ಸಂಸ್ಥೆಯು ಈ ಲಸಿಕೆಯನ್ನು ಉತ್ಪಾದಿಸುತ್ತದೆ. ಹಾಫ್‌ಕಿನ್ ಸಂಸ್ಥೆಯ ಪ್ರತಿವಿಷ ಲಸಿಕೆಯನ್ನು ಪಚ್ಚೆ ಕಡಂಬಳ ಹಾಗೂ ಕಾಳಿಂಗ ಸರ್ಪಗಳು ಕಚ್ಚಿದಾಗ ನೀಡಿದಲ್ಲಿ ಸ್ವಲ್ಪ ಪ್ರಯೋಜನವಿದೆ. ಆದರೆ ಈ ಲಸಿಕೆಯಿಂದ ಕುಳಿಮಂಡಲ ಹಾಗೂ ಕಡಲ ಹಾವುಗಳ ಕಡಿತಕ್ಕೆ ಯಾವ ಪ್ರಯೋಜನವೂ ಆಗುವುದಿಲ್ಲ. ಈ ಹಾವುಗಳೇ ತುಂಬ ಅಪರೂಪ. ಅಲ್ಲದೆ ಇವು ಕಚ್ಚಲು ಇಷ್ಟಪಡುವುದಿಲ್ಲ ಅಥವಾ ಮನುಷ್ಯ ಸಾಯುವಷ್ಟು ವಿಷಕಾರಿಯಾದ ವಿಷವನ್ನು ಹೊಂದಿಲ್ಲ.

ಉತ್ತರ ಪ್ರದೇಶ, ತಮಿಳುನಾಡು ಮತ್ತು ಪಶ್ಚಿಮ ಬಂಗಾಳಗಳ ಸರ್ಕಾರಿ ಆಸ್ಪತ್ರೆಗಳಲ್ಲಿ 1969ರಲ್ಲಿ ದಾಖಲಾದ ಹಾವಿನ ಕಡಿತಗಳಲ್ಲಿನ ಅಂಕಿ-ಅಂಶಗಳ ವಿವರಗಳು ಈ ಕೆಳಕಂಡಂತಿವೆ (ಡಾ.ವೈ ಸವಾಯ್ ಮತ್ತು ಡಾ. ಎಂ. ಹೋಮ). ಈ ಅಂಕಿ ಅಂಶಗಳನ್ನು ಅಧ್ಯಯನ ಮಾಡಿದಾಗ ಹಾವು ಕಚ್ಚುವ ಸಾಧ್ಯತೆಯನ್ನು ಹೇಗೆ ಕಡಿಮೆ ಮಾಡಿಕೊಳ್ಳಬಹುದೆಂದು ಗೊತ್ತಾಗುತ್ತದೆ :

*ಹಾವು ಕಚ್ಚಿದ ಶರೀರದ ಅಂಗಗಳು :*

ಪಾದ ಹಾಗೂ ಕೆಳಕಾಲು : 72%
ಅಂಗೈ ಹಾಗೂ ತೋಳು : 25%
ತಲೆ ಹಾಗೂ ಶರೀರ : 3%
(ಕಾಲುಗಳ ಮೇಲ್ಭಾಗವೂ ಸೇರಿ)

*ಹಾವು ಕಚ್ಚಿದ ವೇಳೆ :*

ಸಂಜೆ ಮತ್ತು ಕತ್ತಲಾದ ನಂತರ : 68%
ಬೆಳಿಗ್ಗೆ ಹಾಗೂ ಅಪರಾಹ್ನ : 32%

ಭಾರತದಲ್ಲಿ ಕೃಷಿ ಹಾಗೂ ಇತರೆ ಕೂಲಿಕಾರರಿಗೆ ಹಾವು ಕಚ್ಚುವುದು ಪ್ರಮುಖವಾಗಿ ವೃತ್ತಿಗೆ ಸಂಬಂಧಿಸಿದ ಅಪಾಯ. ಈ ಜನರಿಗೆ ಹಾವು ಕಚ್ಚುವ ಅತಿ ಹೆಚ್ಚಿನ ಅಪಾಯದ ಕಾಲವೆಂದರೆ ಮಳೆಗಾಲ. ಏಕೆಂದರೆ ಮಳೆಗಾಲದಲ್ಲಿ (ಅ) ಹಾವುಗಳು ಹೆಚ್ಚು ಚಟುವಟಿಕೆಯಿಂದಿರುತ್ತವೆ (ಆ) ಆ ಕಾಲದಲ್ಲಿ ದಟ್ಟವಾದ ಹುಲ್ಲು ಹಾಗೂ ಪೊದೆಗಳಿರುತ್ತವೆ ಮತ್ತು (ಇ) ಆ ಕಾಲದಲ್ಲಿಯೇ ಅತಿ ಹೆಚ್ಚು ಹೊಲದ ಕೆಲಸವಿರುತ್ತದೆ. ಹೆಚ್ಚಿನ ಪ್ರಚಾರ ಹಾಗೂ ಪ್ರತಿವಿಷ ಲಸಿಕೆಯ ವಿತರಣೆಯ ಆಂದೋಲನದಿಂದ

ಭಾರತದಲ್ಲಿ ಹಾವುಗಳು ಕಚ್ಚುವುದರಿಂದ ಉಂಟಾಗುವ ಸಾವುಗಳ ಪ್ರಮಾಣದಲ್ಲಿ ಅರ್ಧದಷ್ಟು ಕಡಿಮೆಮಾಡಬಹುದು.

ಪಶ್ಚಿಮ ಬಂಗಾಳದಲ್ಲಿ ಹಾವು ಕಚ್ಚುವುದರಿಂದ ಅತಿ ಹೆಚ್ಚು ಸಾವುಂಟಾಗುತ್ತವೆಂದು ವರದಿಯಾಗಿದೆ. ಹಾವು ಕಚ್ಚಿಸಿಕೊಂಡವರಲ್ಲಿ ಶೇಕಡಾ10ರಷ್ಟು ಜನ ಮಾತ್ರ ಆಸ್ಪತ್ರೆಗೆ ದಾಖಲಾಗುತ್ತಾರೆಂಬ ಲೆಕ್ಕಾಚಾರ ಸರಿಯೆಂದು ಪರಿಗಣಿಸಿದರೆ, ಪಶ್ಚಿಮ ಬಂಗಾಳದಲ್ಲಿ ಪ್ರತಿ ವರ್ಷ ಹಾವು ಕಚ್ಚುವುದರಿಂದ 3000 ಸಾವುಗಳು ಉಂಟಾಗುತ್ತಿವೆ. ಭಾರತದ ಯಾವುದೇ ಜಿಲ್ಲೆಗೆ ಹೋಲಿಸಿದರೆ ಕಳೆದ 100 ವರ್ಷಗಳಿಂದ ಹಾಗೂ ಈಗಲೂ ಸಹ ಅತಿ ಹೆಚ್ಚು ಹಾವು ಕಚ್ಚುವುದು ಪಶ್ಚಿಮ ಬಂಗಾಳದ ನಾದಿಯ ಜಿಲ್ಲೆಯಲ್ಲಿ.

ಭಾರತದಲ್ಲಿ ಹಾವು ಕಚ್ಚುವುದರಲ್ಲಿನ ಪ್ರಾಂತೀಯ ವಿವರಗಳನ್ನು ಈ ಕೆಳಗಿನ ಪಟ್ಟಿ ನೀಡುತ್ತದೆ. ಹಾವು ಕಚ್ಚಿಸಿಕೊಂಡವರಲ್ಲಿ ಸುಮಾರು 90 ರಷ್ಟು ಜನ ಆಸ್ಪತ್ರೆಗೆ ಬರುವುದೇ ಇಲ್ಲವೆಂಬುದನ್ನು ಹಾಗೂ ಈ ವಿವರಗಳು ದಾಖಲಾಗಿರುವ ಅಂಕಿ – ಅಂಶಗಳು ಮಾತ್ರ ಎಂಬುದನ್ನು ನೆನಪಿನಲ್ಲಿಡಬೇಕು.

### 1969* ರಲ್ಲಿ ಭಾರತದಲ್ಲಿ ಹಾವಿನ ಕಡಿತಗಳಿಗೊಳಗಾದ ಪ್ರಾದೇಶಿಕ ವಿವರಗಳು

| *ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶ* | *ಜನ ಸಂಖ್ಯೆ* | *ಸರ್ಕಾರಿ ಆಸ್ಪತ್ರೆಗಳಲ್ಲಿ ದಾಖಲಾಗಿದ್ದ ಹಾವು ಕಚ್ಚಿಸಿಕೊಂಡಿದ್ದ ವ್ಯಕ್ತಿಗಳು* | *ಸಾವುಗಳು* |
|---|---|---|---|
| 1. ಆಂಧ್ರ ಪ್ರದೇಶ | 43,502,000 | 141 | 23 |
| 2. ಅಸ್ಸಾಂ | 15,947,000 | 141 | 5 |
| 3. ಬಿಹಾರ | 56,353,000 | 872 | 21 |
| 4. ಗುಜರಾತ್ | 26,697,000 | 2,274 | 62 |
| 5. ಹರ್‍ಯಾಣ | 10,036,000 | 259 | 8 |
| 6. ಹಿಮಾಚಲ ಪ್ರದೇಶ | 3,460,000 | 72 | 15 |
| 7. ಜಮ್ಮು ಮತ್ತು ಕಾಶ್ಮೀರ | 4,616,000 | 832 | 33 |
| 8. ಕರ್ನಾಟಕ | 29,299,000 | 682 | 36 |
| 9. ಕೇರಳ | 21,347,000 | 1,484 | 97 |
| 10. ಮಧ್ಯ ಪ್ರದೇಶ | 41,651,000 | 1,612 | 90 |
| 11. ಮಹಾರಾಷ್ಟ್ರ | 50,412,000 | 992 | 100 |
| 12. ಮಣಿಪುರ | 1,072,000 | 682 | 36 |
| 13. ಮೇಘಾಲಯ | 1,011,000 | 9 | 0 |

| ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶ | ಜನ ಸಂಖ್ಯೆ | ಸರ್ಕಾರಿ ಆಸ್ಪತ್ರೆಗಳಲ್ಲಿದಾಖಲಾಗಿದ್ದ ಹಾವು ಕಚ್ಚಿಸಿಕೊಂಡಿದ್ದ ವ್ಯಕ್ತಿಗಳು | ಸಾವುಗಳು |
|---|---|---|---|
| 14. ನಾಗಲ್ಯಾಂಡ್ | 516,000 | 64 | 1 |
| 15. ಒರಿಸ್ಸಾ | 21,944,000 | 895 | 27 |
| 16. ಪಂಜಾಬ್ | 13,551,000 | 196 | 16 ('67) |
| 17. ರಾಜಾಸ್ಥಾನ | 25,765,000 | 1,426 | 62 ('68) |
| 18. ಉತ್ತರ ಪ್ರದೇಶ | 88,341,000 | 1,351 | 68 |
| 19. ತಮಿಳು ನಾಡು | 41,199,000 | 968 | 31 |
| 20. ತ್ರಿಪುರ | 1,556,000 | 21 | 3 ('67) |
| 21. ಪಶ್ಚಿಮ ಬಂಗಾಳ | 44,312,000 | 7,835 | 384 |
| 22. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು | 115,000 | 171 | 3 ('70) |
| 23. ಅರುಣಾಚಲ ಪ್ರದೇಶ | 467,000 | 90 | 0 ('67) |
| 24. ಚಂಡೀಘಡ | 257,000 | 28 | 4 ('68) |
| 25. ದಾದ್ರ ಮತ್ತು ನಗರ ಹವೇಲಿ | 741,000 | - | - |
| 26. ದೆಹಲಿ | 4,065,000 | 195 | 4 |
| 27. ಗೋವ, ದಮನ್ ಮತ್ತು ದೀವ್ | 857,000 | 195 | 4 ('67) |
| 28. ಲಕ್ಷ ದ್ವೀಪಗಳು | 31,000 | 0 | 0 |
| 29. ಪಾಂಡಿಚೇರಿ | 471,000 | 97 | 1 |
| ಒಟ್ಟು | | 23,584 | 1,134 |

* ಡಾ. ಯೋಶಿಯೋ ಸವಾಯ್ ಮತ್ತು ಎಂ.ಹೋಮ ಅವರ ದ ಸ್ನೇಕ್ ಬೈಟ್ಸ್ ಇನ್ ಇಂಡಿಯಾ, ಸಂಪುಟ–7, ಸರ್ಪ ಸಂಸ್ಥೆ, ಜಪಾನ್ 1975 ಇವರಿಂದ ಪ್ರಕಟಿತ.

# ಭಾರತದ ಹಾವುಗಳ ಪಟ್ಟಿ

**ಪೀಠಿಕೆ**

ಇದು ಭಾರತದ ಹಾವುಗಳ ವರ್ಗೀಕರಣ ಹಾಗೂ ಪರಿಶೀಲನಾ ಪಟ್ಟಿ. ಎಂ. ಎ.ಸ್ಮಿತ್ ಅವರ ಬ್ರಿಟಿಷ್ ಭಾರತದ ಪ್ರಾಣಿ ಸಂಪತ್ತು, ಭಾಗ 3 ಪುಸ್ತಕದ ಪ್ರಕಾರ ಹಾವುಗಳನ್ನು ಅವುಗಳ ವಿಕಾಸದ ಅನುಕ್ರಮದಲ್ಲಿ ಪಟ್ಟಿ ಮಾಡಲಾಗಿದೆ. ಸ್ಮಿತ್ ಅವರ ಪುಸ್ತಕ ಪ್ರಕಟವಾದ ಮೇಲೆ ಪ್ರಾಣಿಗಳ ವೈಜ್ಞಾನಿಕ ಹೆಸರುಗಳಲ್ಲಿ ಸಾಕಷ್ಟು ಬದಲಾವಣೆಯಾಗಿದೆ. ನಾವು ವೈಯಕ್ತಿಕ ಪತ್ರವ್ಯವಹಾರದ ಮೂಲಕ ಹಾಗೂ ಎ.ಎಸ್.ರೋಮರ್ ಮತ್ತು ಗಾರ್ತ್ ಅಂಡರ್‌ವುಡ್ ಅವರ ಪುಸ್ತಕಗಳನ್ನು ಆಧರಿಸಿ (ಗ್ರಂಥ ಋಣ ನೋಡಿ) ಹಾವುಗಳ ವೈಜ್ಞಾನಿಕ ಹೆಸರುಗಳನ್ನು ಪುನರ್ ಪರಿಶೀಲಿಸುವ ಪ್ರಯತ್ನ ಮಾಡಿದ್ದೇವೆ.

ಹಾವುಗಳಿಗೆ ವಿವಿಧ ಸ್ಥಳೀಯ ಹೆಸರುಗಳು ಹಾಗೂ ವಿವಿಧ ಪ್ರಾಂತೀಯ ಭಾಷೆಗಳ ಹೆಸರುಗಳಿರುವುದರಿಂದ ಸಾಧ್ಯವಾದಾಗಲೆಲ್ಲ ನಾವು ವೈಜ್ಞಾನಿಕ ನಾಮ ಪದ್ಧತಿಯನ್ನು ಅನುಸರಿಸಲು ಪ್ರಯತ್ನಿಸಬೇಕು. ಆದರೆ ಅನೇಕರು ಸಾಮಾನ್ಯವಾಗಿ ಜನಜನಿತವಾಗಿರುವ ಹೆಸರು ಹಾಗೂ ವಿವರಗಳನ್ನು ಸೂಚಿಸುವ ಹೆಸರುಗಳನ್ನು ಬಳಸಲು ಇಷ್ಟಪಡುತ್ತಾರೆ. ನಾವು ಹೆಚ್ಚು ಜನರಿಗೆ ಹಾವುಗಳ ಬಗ್ಗೆ ತಿಳಿಸುವಾಗ ಅವುಗಳ ಹೆಸರಿನ ಬಗ್ಗೆ ಪ್ರಮಾಣಿತ ಪಟ್ಟಿಯಿರಬೇಕು. ಪುಸ್ತಕಗಳಲ್ಲಿ ಆಗಾಗ್ಗೆ ಬಳಸಲಾಗಿರುವ ಇಂಗ್ಲಿಷ್ ಹೆಸರುಗಳು ಅಥವಾ ಅವುಗಳ ಲಕ್ಷಣಗಳನ್ನು ಅವಲಂಬಿಸಿ ಇಟ್ಟಿರುವ ಹೆಸರುಗಳು, ವಿತರಣೆ ಅಥವಾ ಆ ಹಾವನ್ನು ಗುರುತಿಸಿದ ವ್ಯಕ್ತಿ ಅಥವಾ ಒಬ್ಬ ವ್ಯಕ್ತಿಯ ಹೆಸರಲ್ಲಿ ವಿವರಿಸಲಾಗುವ ಹಾವುಗಳ ಪ್ರಮಾಣಿತ ಪಟ್ಟಿಯನ್ನು ನಾವಿಲ್ಲಿ ಮಂಡಿಸುತ್ತಿದ್ದೇವೆ.

ಜಿ. ಎ. ಬೌಲಿಂಗರ್, ಎಫ್. ವಾಲ್ ಮತ್ತು ಎಂ. ಎ. ಸ್ಮಿತ್ ಅವರುಗಳಿಂದ ಹಾವುಗಳ ವಾಸಸ್ಥಳಗಳ ವಿವರಗಳನ್ನು ಪಡೆಯಲಾಗಿದೆ. ಜೊತೆಯಲ್ಲಿ ಇತ್ತೀಚಿನ ಅಧ್ಯಯನಗಳನ್ನು ಪರಿಗಣಿಸಿ ಕೆಲವು ಬದಲಾವಣೆಗಳನ್ನು ಸೇರಿಸಿಕೊಂಡಿದ್ದೇವೆ. ಭಾರತದ ಹಾವುಗಳ ವಿತರಣೆಯ ಬಗ್ಗೆ ನಮ್ಮ ಜ್ಞಾನ ತೀರ ಅಪೂರ್ಣವಾದುದು. ಆದ್ದರಿಂದ ಹಾವುಗಳ ವಾಸಸ್ಥಳಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸುವ ಅಗತ್ಯವಿದೆ. ಓದುಗರು ತಮಗೆ ಸಿಕ್ಕಿದ ಜೀವಂತ ಅಥವಾ ಸಾಯಿಸಿ ಸಂರಕ್ಷಿಸಿದ ಹಾವುಗಳನ್ನು, ಹಾವಿನ ಪೊರೆಗಳನ್ನು ಮತ್ತು ಫೊಟೋಗಳನ್ನು ಅವು ಜೀವಿಸಿದ್ದ ನಿಖರವಾದ ಸ್ಥಳ ಹಾಗೂ ದಿನಾಂಕಗಳನ್ನು ಬರೆದು ಮದ್ರಾಸಿನ ಸರ್ಪವನ, ಚೆನ್ನೈ–600022 ಇಲ್ಲಿಗೆ ಕಳುಹಿಸುವುದರಿಂದ ಈ ಅಧ್ಯಯನಕ್ಕೆ ಸಹಾಯ ಮಾಡಿದಂತಾಗುತ್ತದೆ.

'ಭಾರತದಾದ್ಯಂತ' ಎಂದು ತಿಳಿಸಿರುವೆಡೆ ಆ ಹಾವು ತುಂಬ ಸಾಮಾನ್ಯವಾದುದು ಎಂದು ತಿಳಿದುಕೊಳ್ಳುವ ಅಗತ್ಯವಿಲ್ಲ. ಅದರ ವಿತರಣೆ ತುಂಬ ವಿಶಾಲವಾದುದು ಎಂದು ಅರಿಯಬೇಕು.

# ಭಾರತದ ಹಾವುಗಳ ಪಟ್ಟಿ

**ವರ್ಗ** : ಸರ್ಪೆಂಟಸ್

**ಅವವರ್ಗ** : ಸ್ಕೊಲಿಕೊಫಿಡಿಯ

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| **ಕುಟುಂಬ** – ಟಿಫ್ಲೊಪಿಡೆ | | |
| **ಉಪಕುಟುಂಬ** – ಟಿಫ್ಲೊಪಿನೆ | | |
| **ಕುಲ** – ಟಿಫ್ಲಿನ್ (ಹುಳ-ಹಾವುಗಳು, ಕುರುಡು ಹಾವುಗಳು) | | |
| **ಪ್ರಭೇದಗಳು** : | | |
| 1. ಪೊರೆಕ್ಟಸ್ | ಸ್ಲೆಂಡರ್ ವರ್ಮ್ ಸ್ನೇಕ್(ತೆಳುವಾದ ಹುಳ-ಹಾವು) | ಭಾರತದ ಆದ್ಯಂತ |
| 2. ಸಾಮಸೆಸ್ | ಗುಂತರ್ಸ್ ವರ್ಮ್ ಸ್ನೇಕ್(ಗುಂತರನ ಹುಳ-ಹಾವು) | ಪೂರ್ವ ಭಾರತ |
| 3 ಬ್ರಾಮಿನ | ಕಾಮನ್ ವರ್ಮ್ ಸ್ನೇಕ್(ಸಾಮಾನ್ಯ ಹುಳ-ಹಾವು) | ಭಾರತದ ಆದ್ಯಂತ |
| 4. ತರ್ಸ್‌ಟೋನಿ | ತರ್ಸ್‌ಟನ್ಸ್ ವರ್ಮ್ ಸ್ನೇಕ್(ತರ್ಸ್‌ಟನ್ಸ್ ಹುಳ-ಹಾವು) | ನೈಋತ್ಯ ಭಾರತ |
| 5. ಜೆರ್ಡೋನಿ | ಜೆರ್ಡೋನ್ಸ್ ವರ್ಮ್ ಸ್ನೇಕ್(ಜೆರ್ಡೋನ್ಸ್ ಹುಳ-ಹಾವು) | ಪೂರ್ವಹಿಮಾಲಯದ ಪರ್ವತಗಳು:ಅಸ್ಸಾಂ |
| 6. ಟೆನುಕೋಲಿಸ್ | ಪೀಟರ್ಸ್ ವರ್ಮ್ ಸ್ನೇಕ್(ಪೀಟರ್ಸ್ ಹುಳ-ಹಾವು) | ಪೂರ್ವ ಹಿಮಾಲಯದ ಪರ್ವತಗಳು:ಅಸ್ಸಾಂ |
| 7. ಡೈಯಾರ್ಡಿ | ಲಾರ್ಜ್ ವರ್ಮ್ ಸ್ನೇಕ್(ದೊಡ್ಡ ಹುಳ-ಹಾವು) | ಅಸ್ಸಾಂ |
| 8. ಓಟೆಸಿ | ಓಟ್ಸ್ ವರ್ಮ್ ಸ್ನೇಕ್(ಓಟ್ಸ್ ಹುಳ-ಹಾವು) | ಅಂಡಮಾನ್ ದ್ವೀಪಗಳು |
| 9. ಬೋತ್ರಿಯೊರಿಂಕಸ್ | ಅಸ್ಸಾಂ ವರ್ಮ್ ಸ್ನೇಕ್(ಅಸ್ಸಾಂ ಹುಳ-ಹಾವು) | ಅಸ್ಸಾಂ |
| 10. ಟೆಂಡಲಿ ಮಲಬಾರ್ | ಮಲಬಾರ್ ವರ್ಮ್ ಸ್ನೇಕ್(ಮಲಬಾರ್ ಹುಳ-ಹಾವು) | ನೈಋತ್ಯ ಘಟ್ಟಗಳು |
| 11. ಬೆಡೋಮಿ | ಬೆಡ್ಡೋಮ್ಸ್ ವರ್ಮ್ ಸ್ನೇಕ್(ಬೆಡ್ಡೋಮ್ಸ್ ಹುಳ-ಹಾವು) | ದಕ್ಷಿಣ ಭಾರತದ ಬೆಟ್ಟಗಳು |

12. *ಅಲಿಗೊಲಿಪಿಸ್* ವಾಲ್ಸ್ ವರ್ಮ್ ಸ್ನೇಕ್(ವಾಲ್ಸ್ ಹುಳ-ಹಾವು) ಪೂರ್ವ ಹಿಮಾಲಯ ಪ್ರದೇಶ
13. *ಅಂಡಮಾನೆನ್ಸಿಸ್* ಅಂಡಮಾನ್ ವರ್ಮ್ ಸ್ನೇಕ್(ಅಂಡಮಾನ್ ಹುಳ-ಹಾವು) ಅಂಡಮಾನ್ ದ್ವೀಪಗಳು
14. *ಆಕುಟಸ್* ಬೀಕ್ಡ್ ವರ್ಮ್ ಸ್ನೇಕ್(ಕೊಕ್ಕಿನ ಹುಳ-ಹಾವು) ಮಧ್ಯ ಭಾರತ

**ಕುಟುಂಬ : ಯುರೊಪೆಲ್ಟಿಡ್** (ಕವಚಬಾಲದ ಹಾವುಗಳು)

**ಕುಲ:** *ಮೆಲನೊಫಿಡಿಯಂ*

**ಪ್ರಭೇದಗಳು :**

15. *ಪಂಕ್ಟೇಟಂ* ಪೈಡ್-ಬೆಲ್ಲಿ ಶೀಲ್ಡ್‌ಟೈಲ್(ಸಣ್ಣ ಹೊಟ್ಟೆಯ ಕವಚಬಾಲ) ಗೋವದಿಂದ ದಕ್ಷಿಣ ಕೇರಳದ ಬೆಟ್ಟಗಳು
16. *ಬೈಲಿನಿಯೇಟಮ್* ಎಲ್ಲೋಸ್ಟ್ರೈಪ್ಡ್ ಶೀಲ್ಡ್‌ಟೈಲ್(ಹಳದಿ ಪಟ್ಟೆ ಕವಚಬಾಲ) ಕಲ್ಲಿಕೋಟೆ ಜಿಲ್ಲೆ, ಕೇರಳ
17. *ವೈನಡೆನ್ಸಿ* ವೈನಾಡ್ ಶೀಲ್ಡ್‌ಟೈಲ್(ವೈನಾಡ್‌ನ ಕವಚ ಬಾಲ) ಕಲ್ಲಿಕೋಟೆ, ಕೊಡಗು, ಕರ್ನಾಟಕ

**ಕುಲ :** *ಪ್ಲಾಟಿಪ್ಲೆಕ್ಟ್ರುರಸ್*

**ಪ್ರಭೇದಗಳು :**

18. *ಟ್ರಯಲಿನಿಯೇಟಸ್* ಬ್ಲ್ಯಾಕ್ ಲೈನ್ಡ್ ಶೀಲ್ಡ್‌ಟೈಲ್(ಕಪ್ಪು ಗೆರೆಯ ಕವಚ ಬಾಲ) ಅಣ್ಣಾಮಲೈ, ದಕ್ಷಿಣ ಕೇರಳ
19. *ಮದುರೈನ್ಸಿಸ್* ಮದುರೈ ಶೀಲ್ಡ್‌ಟೈಲ್ (ಮದುರೈನ ಕವಚಬಾಲ) ಪಳನಿ, ದಕ್ಷಿಣ ಕೇರಳದ ಬೆಟ್ಟಗಳು

**ಕುಲ :** *ಟೆರೆಟ್ರುರಸ್*

**ಪ್ರಭೇದ :**

20. *ಸಾಂಗ್ಯುನಿಯಸ್* ವೆಸ್ಟರ್ನ್ ಶೀಲ್ಡ್‌ಟೈಲ್ (ಪಶ್ಚಿಮದ ಕವಚಬಾಲ) ವೈನಾಡ್, ಅಣ್ಣಾಮಲೈ; ದಕ್ಷಿಣ ಕೇರಳ

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| **ಕುಲ: ಬ್ರಾಕಿ ಒಫಿಡಿಯಮ್** | | |
| 21 ರೊಡೋಗಾಸ್ಟರ್ | ವಾಲ್ಸ್ ಶೀಲ್ಡ್‌ಟೈಲ್(ವಾಲ್ಸ್ ಕವಚಬಾಲ) | ಪಳನಿ ಬೆಟ್ಟಗಳು |
| **ಕುಲ : ಪ್ಲೆಕ್ಟ್ರುರಸ್** | | |
| **ಪ್ರಭೇದಗಳು:** | | |
| 22. ಪೆರೊಟೇ | ಪೆರ್ರೋಟೆಟ್ಸ್ ಶೀಲ್ಡ್‌ಟೈಲ್(ಪೆರ್ರೋಟೆಟ್ಸ್ ಕವಚಬಾಲ) | ನೀಲಗಿರಿ ಬೆಟ್ಟಗಳು, ಅಣ್ಣಾಮಲೈ |
| 23. ಗುಯಂತರಿ | ಪರ್ಪಲ್ ಶೀಲ್ಡ್‌ಟೈಲ್(ಊದಾ ಬಣ್ಣದ ಕವಚ ಬಾಲ) | ಸಿಸ್ಪರ ಘಟ್ಟಗಳು, ನೀಲಗಿರಿ |
| 24. ಆರಿಯಸ್ | ಗೋಲ್ಡನ್ ಶೀಲ್ಡ್‌ಟೈಲ್(ಬಂಗಾರದ ಕವಚಬಾಲ) | ಚಂಬ್ರ ಬೆಟ್ಟಗಳು |
| 25. ಕೆನರಿಕಸ್ | ಕೆನರಾ ಶೀಲ್ಡ್‌ಟೈಲ್(ಕೆನರಾ ಕವಚಬಾಲ) | ದಕ್ಷಿಣ ಕನ್ನಡ ಜಿಲ್ಲೆ, ಕರ್ನಾಟಕ |
| **ಕುಲ:ಯುರೋಪೆಲ್ಟಿಸ್** | | |
| **ಪ್ರಭೇದಗಳು:** | | |
| 26. ಇಲಿಯೋಟಿ | ಇಲಿಯಟ್ಸ್ ಶೀಲ್ಡ್‌ಟೈಲ್(ಇಲಿಯಟ್ಸ್‌ನ ಕವಚಬಾಲ) | ನೈರುತ್ಯ ಘಟ್ಟಗಳು, ಪೂರ್ವ ಘಟ್ಟಗಳು |
| 27. ನೈಟಿಡಸ್ | ಕೊಚಿನ್ ಶೀಲ್ಡ್‌ಟೈಲ್(ಕೊಚಿನ್‌ನ ಕವಚಬಾಲ) | ಅಣ್ಣಾಮಲೈ ಬೆಟ್ಟಗಳು |
| 28. ಓಸಿಲೇಟಸ್ | ನೀಲ್‌ಗಿರಿ ಶೀಲ್ಡ್‌ಟೈಲ್(ನೀಲಗಿರಿ ಕವಚಬಾಲ) | ನೀಲಗಿರಿ ಮತ್ತು ಅಣ್ಣಾಮಲೈ ಬೆಟ್ಟಗಳು |
| 29. ಡಿಂಡಗಲೆನ್ಸಿಸ್ | ಡಿಂಡಿಗಲ್ ಶೀಲ್ಡ್‌ಟೈಲ್(ಡಿಂಡಿಗಲ್ಲಿನ ಕವಚಬಾಲ) | ಸಿರುಮಲೈ ಬೆಟ್ಟಗಳು |
| 30. ಬೆಡೋಮಿ | ಬೆಡ್ಡೋಮ್ಸ್ ಶೀಲ್ಡ್‌ಟೈಲ್(ಬೆಡ್ಡೋಮ್ಸ್ ಕವಚಬಾಲ) | ಅಣ್ಣಾಮಲೈ ಬೆಟ್ಟಗಳು |
| 31. ಮ್ಯಾಕ್ರೊರಿಂಕಸ್ | ಅಣ್ಣಾಮಲೈ ಶೀಲ್ಡ್‌ಟೈಲ್(ಅಣ್ಣಾಮಲೈ ಕವಚಬಾಲ) | ಅಣ್ಣಾಮಲೈ ಬೆಟ್ಟಗಳು |
| 32. ವುಡ್-ಮಾಸೊನಿ | ಬ್ಲ್ಯಾಕ್ ಬೆಲ್ಲೀಡ್ ಶೀಲ್ಡ್‌ಟೈಲ್(ಕಪ್ಪು ಉದರದ ಕವಚಬಾಲ) | ಅಣ್ಣಾಮಲೈ, ಪಳನಿ, ನೀಲಗಿರಿ, ತಿರುನೆಲ್ವೇಲಿ ಬೆಟ್ಟಗಳು |

| | | |
|---|---|---|
| 33. ಮಾಕ್ರೊಲೆಪಿಸ್ ಮಾಕ್ರೊಲೆಪಿಸ್ | ಬಾಂಬೆ ಶೀಲ್ಡ್‌ಟೈಲ್(ಮುಂಬಯಿಯ ಕವಚ ಬಾಲ) | ಮುಂಬಯಿ ಸಮೀಪದ ಬೆಟ್ಟಗಳು |
| 33.ಕ. ಎಂ.ಮಹಾಬಲೇಶ್ವರೆನ್ಸಿಸ್ | ಮಹಾಬಲೇಶ್ವರ್ ಶೀಲ್ಡ್‌ಟೈಲ್ (ಮಹಾಬಲೇಶ್ವರ ಕವಚಬಾಲ) | ಮಹಾಬಲೇಶ್ವರ |
| 34. ಸಿಲಾನಿಕಸ್ | ಕೇರಳ ಶೀಲ್ಡ್‌ಟೈಲ್(ಕೇರಳ ಕವಚಬಾಲ) | ಗೋವಾದಿಂದ ದಕ್ಷಿಣ ಕೇರಳದವರೆಗೆ, ಶೆವಾರಾಯ್ಸ್ |
| 35. ಆರ್ಸಿಸೆಪ್ಸ್ | ತಿರುನೆಲ್ವೇಲಿ ಶೀಲ್ಡ್‌ಟೈಲ್(ತಿರುನೆಲ್ವೇಲಿ ಕವಚಬಾಲ) | ದಕ್ಷಿಣ ಕೇರಳ, ತಿರುನೆಲ್ವೇಲಿ ಬೆಟ್ಟಗಳು |
| 36. ರುಬ್ರೊಮ್ಯಾಕುಲೇಟಸ್ | ರೆಡ್ ಸ್ಪಾಟೆಡ್ ಶೀಲ್ಡ್‌ಟೈಲ್(ಕೆಂಪು ಚುಕ್ಕೆಯ ಕವಚಬಾಲ) | ಅಣ್ಣಾಮಲೈ ಮತ್ತು ನೀಲಗಿರಿ ಬೆಟ್ಟಗಳು |
| 37. ರುಬ್ರೊಲೈನಿಯೇಟಸ್ | ರೆಡ್ ಲೈನ್ಡ್ ಶೀಲ್ಡ್‌ಟೈಲ್(ಕೆಂಪು ಗೆರೆಯ ಕವಚಬಾಲ) | ಅಣ್ಣಾಮಲೈ ಮತ್ತು ದಕ್ಷಿಣ ಕೇರಳ ಬೆಟ್ಟಗಳು |
| 38. ಮೈಹೆಂಡ್ರೆ | ಬಾರ್ಡ್ ಶೀಲ್ಡ್‌ಟೈಲ್(ಗೆರೆಗಳ ಕವಚಬಾಲ) | ನೀಲಗಿರಿ, ದಕ್ಷಿಣ ಕೇರಳ |
| 39. ಬ್ರೊಗಾಮಿ | ಸಿರುಮಾಲೈ ಶೀಲ್ಡ್‌ಟೈಲ್(ಸಿರುಮಾಲೈ ಕವಚಬಾಲ) | ಪಳನಿ ಮತ್ತು ಸಿರುಮಾಲೈ ಬೆಟ್ಟಗಳು |
| 40. ಮ್ಯಾಕ್ಯುಲೇಟಸ್ | ರೆಡ್ ಸೈಡೆಡ್ ಶೀಲ್ಡ್‌ಟೈಲ್(ಕೆಂಪು ಪಾರ್ಶ್ವಗಳ ಕವಚಬಾಲ) | ಅಣ್ಣಾಮಲೈ ಮತ್ತು ದಕ್ಷಿಣ ಕೇರಳ ಬೆಟ್ಟಗಳು |
| 41. ಪೀಟರ್ಸ್ | ಪೀಟರ್ಸ್ ಶೀಲ್ಡ್‌ಟೈಲ್(ಪೀಟರ್ಸ್‌ನ ಕವಚಬಾಲ) | ಅಣ್ಣಾಮಲೈ ಬೆಟ್ಟಗಳು |
| 42. ಲೈಯುರ | ಅಶಾಂಬು ಶೀಲ್ಡ್‌ಟೈಲ್(ಅಶಾಂಬು ಕವಚಬಾಲ) | ಮಧುರೈ ಮತ್ತು ತಿರುನೆಲ್ವೇಲಿ ಬೆಟ್ಟಗಳು |
| 43. ಪಲ್ನೆನ್ಸಿಸ್ | ಪಳ್ನಿ ಶೀಲ್ಡ್‌ಟೈಲ್(ಪಳ್ನಿ ಕವಚಬಾಲ) | ಪಳನಿ ಮತ್ತು ದಕ್ಷಿಣ ಕೇರಳ ಬೆಟ್ಟಗಳು |
| 44. ಸ್ಮಿಥಿ | ವೈಲೆಟ್ ಶೀಲ್ಡ್‌ಟೈಲ್(ನೇರಿಳೆ ಬಣ್ಣದ ಕವಚಬಾಲ) | ಅಣ್ಣಾಮಲೈ ಬೆಟ್ಟಗಳು |

ಕುಲ : ರೈನೊಫಿಸ್

ಪ್ರಭೇದಗಳು :

| | | |
|---|---|---|
| 45. ಸಂಗ್ವಿನಿಯಸ್ | ರೆಡ್ ಬೆಲೀಡ್ ಶೀಲ್ಡ್‌ಟೈಲ್(ಕೆಂಪು ಉದರದ ಕವಚಬಾಲ) | ದಕ್ಷಿಣ ಕನ್ನಡ ಜಿಲ್ಲೆ, ನೀಲಗಿರಿ, ತಿರುನೆಲ್ವೇಲಿ |
| 46. ಫರ್ಗುಸೋನಿಯಸ್ | ಕಾರ್ಡ್‌ಮಾನ್ ಶೀಲ್ಡ್‌ಟೈಲ್ (ಕಾರ್ಡ್‌ಮಾನ್ ಕವಚಬಾಲ) | ಕಾರ್ಡ್‌ಮಾನ್ ಬೆಟ್ಟಗಳು, ಕೇರಳ |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| 47. ಟ್ರಾವೆಂಕೂರಿಕಸ್ | ಟ್ರಾವೆಂಕೂರ್ ಶೀಲ್ಡ್‌ಟೈಲ್ (ಟ್ರಾವೆಂಕೂರ್ ಕವಚಬಾಲ) | ಕೇರಳ |
| **ಕುಟುಂಬ :** ಜೆನೊಪೆಲ್ಟಿಡ್ | | |
| **ಕುಲ :** ಜೆನೋಪೆಲ್ಟಿಸ್ | | |
| **ಪ್ರಭೇದ :** | | |
| 48. ಯೂನಿಕಲರ್ | ಸನ್‌ಬೀಮ್ ಸ್ನೇಕ್ (ಸೂರ್ಯರಶ್ಮಿ ಹಾವು) | ಅಂಡಮಾನ್ ದ್ವೀಪಗಳು |
| **ಕುಟುಂಬ :** ಬೋಯಿಡೆ | | |
| **ಉಪಕುಟುಂಬ :** ಪೈತೋನಿನಿ | | |
| **ಕುಲ :** ಪೈಥಾನ್ | | |
| **ಪ್ರಭೇದಗಳು:** | | |
| 49. ಮೊಲುರಸ್ | ಇಂಡಿಯನ್ ಪೈಥಾನ್ (ಭಾರತದ ಹೆಬ್ಬಾವು) | ಭಾರತದಾದ್ಯಂತ |
| 50. ರೆಟಿಕುಲೇಟಸ್ | ರೀಗಲ್ ಪೈಥಾನ್ (ರಾಜ ಹೆಬ್ಬಾವು) | ನಿಕೋಬಾರ್ ದ್ವೀಪಗಳು |
| **ಉಪ ಕುಟುಂಬ :** ಬೊಯಿನೆ | | |
| **ಕುಲ :** ಎರಿಕ್ಸ್ | ಸ್ಯಾಂಡ್‌ಬೋಆ (ಮರಳ ಹೆಬ್ಬಾವು) | |
| **ಪ್ರಭೇದಗಳು :** | | |
| 51. ಕೋನಿಕಸ್ | ಕಾಮನ್ ಸ್ಯಾಂಡ್ ಬೋಆ (ಸಾಮಾನ್ಯ ಮರಳ ಹೆಬ್ಬಾವು) | (ಈಶಾನ್ಯ ಭಾರತ ಬಿಟ್ಟು) ಭಾರತದಾದ್ಯಂತ |
| 52. ಜಾನಿ | ರೆಡ್ ಅಥವಾ ಬ್ಲಂಟ್ ಟೈಲ್ಡ್ ಸ್ಯಾಂಡ್ ಬೋಆ (ಕೆಂಪು ಅಥವಾ ಮೊಂಡು ಬಾಲದ ಮರಳ ಹೆಬ್ಬಾವು) | ಭಾರತದಾದ್ಯಂತ (ಶುಷ್ಕ ಪ್ರದೇಶಗಳು) |

**ಅವ ವರ್ಗ:** ಸಿನೋಫಿಡಿಯ
**ಕುಟುಂಬ :** ಡೈಪ್ಸಾಡಿಡಿ
**ಉಪ ಕುಟುಂಬ:** ಪರೈನೆ

| | | |
|---|---|---|
| **ಕುಲ:** ಪಾರಿಸ್ | ಸ್ನೈಯಿಲ್ ಈಟಿಂಗ್ ಸ್ನೇಕ್ಸ್(ಬಸವನಹುಳು ತಿನ್ನುವ ಹಾವು) | |
| **ಪ್ರಭೇದಗಳು:** | | |
| 53. ಮೊಂಟಿಕೋಲ | ಅಸ್ಸಾಂ ಸ್ನೈಯಿಲ್ ಈಟರ್ (ಅಸ್ಸಾಂನ ಬಸವನಹುಳು ಭಕ್ಷಕ) | ಪೂರ್ವ ಹಿಮಾಲಯ, ಅಸ್ಸಾಂ |
| 54. ಮ್ಯಾಕುಲಾರಿಸ್ | ಡಾರ್ಜೀಲಿಂಗ್ ಸ್ನೈಯಿಲ್ ಈಟರ್ (ಡಾರ್ಜೀಲಿಂಗ್‌ನ ಬಸವನಹುಳು ಭಕ್ಷಕ) | ಡಾರ್ಜೀಲಿಂಗ್ |

**ಉಪ ಕುಟುಂಬ :** ಜೆನೊಡರ್ಮಿಟಿನ್

| | | |
|---|---|---|
| **ಕುಲ :** ಸ್ಟೊಲಿಕ್ಷಯ | | |
| **ಪ್ರಭೇದಗಳು :** | | |
| 55. ಖಾಸಿಯೆನ್ಸಿಸ್ | ಖಾಸಿ ಅರ್ತ್ ಸ್ನೇಕ್(ಖಾಸಿ ಭೂ ಸರ್ಪ) | ಅಸ್ಸಾಂ |

**ಉಪ ಕುಟುಂಬ:** ಲೈಕೊಡಾಂಟಿನೆ

| | | |
|---|---|---|
| **ಕುಲ:** ಲೈಕೊಡಾನ್ | ವುಲ್ಫ್ ಸ್ನೇಕ್ (ತೋಳದ ಹಾವುಗಳು) | |
| **ಪ್ರಭೇದಗಳು:** | | |
| 56. ಟ್ರಾವಂಕೂರಿಕಸ್ | ಟ್ರಾವಂಕೂರ್ ವುಲ್ಫ್ ಸ್ನೇಕ್ (ತಿರುವಾಂಕೂರು ತೋಳದ ಹಾವು) | ಪಶ್ಚಿಮ ಘಟ್ಟಗಳು, ಆಂಧ್ರ ಪ್ರದೇಶ |
| 57. ಜಾರ | ಎಲ್ಲೋ ಸ್ಪೆಕಲ್ಡ್ ವುಲ್ಫ್ ಸ್ನೇಕ್ ( ಹಳದಿ ಚುಕ್ಕೆಯ ತೋಳದ ಹಾವು) | ಉತ್ತರ ಪ್ರದೇಶ, ಗಂಜಾಂ ಪೂರ್ವ ಹಿಮಾಲಯ, ಅಸ್ಸಾಂ |
| 58. ಸ್ಟ್ರೇಯೆಟಸ್ | ಬಾರ್ಡ್ ವುಲ್ಫ್ ಸ್ನೇಕ್(ಪಟ್ಟೆ ತೋಳದ ಹಾವು) | ಭಾರತದಾದ್ಯಂತ |
| 59. ಫ್ಲಾವೋಮ್ಯಾಕುಲೇಟಸ್ | ಎಲ್ಲೋ ಸ್ಪಾಟೆಡ್ ವುಲ್ಫ್ ಸ್ನೇಕ್(ಹಳದಿ ತೋಳದ ಹಾವು) | ವಾಯವ್ಯ ಘಟ್ಟಗಳು |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| 60. ಮ್ಯಾಕಿನ್ನೋನಿ | ಮಾಕಿನ್ನೋನ್ಸ್ ವುಲ್ಫ್ ಸ್ನೇಕ್ (ಮ್ಯಾಕಿನ್ನೋನ್ಸ್ ತೋಳದ ಹಾವು) | ಪಶ್ಚಿಮ ಹಿಮಾಲಯ |
| 61. ಆಲಿಕಸ್ | ಕಾಮನ್ ವುಲ್ಫ್ ಸ್ನೇಕ್(ಸಾಮಾನ್ಯ ತೋಳದ ಹಾವು) | ಭಾರತದಾದ್ಯಂತ |
| 62. ಫ್ಯಾಸಿಯೇಟಸ್ | ಬ್ಯಾಂಡೆಡ್ ವುಲ್ಫ್ ಸ್ನೇಕ್(ಪಟ್ಟಿ ತೋಳದ ಹಾವು) | ಪೂರ್ವ ಹಿಮಾಲಯ, ಅಸ್ಸಾಂ |
| 63. ತಿವಾರಿ | ತಿವಾರಿಸ್ ವುಲ್ಫ್ ಸ್ನೇಕ್(ತಿವಾರಿಯ ತೋಳದ ಹಾವು) | ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು |
| ಕುಲ : ಆಲಿಗೋಡಾನ್ | ಕುಕ್ರಿ ಸ್ನೇಕ್ (ಕುಕ್ರಿ ಹಾವು) | |
| **ಪ್ರಭೇದಗಳು:** | | |
| 64. ಸೈಕ್ಲೊರಸ್ | ಕ್ಯಾಂಟರ್ಸ್ ಕುಕ್ರಿ ಸ್ನೇಕ್ (ಕ್ಯಾಂಟರ್ಸ್ ಕುಕ್ರಿ ಹಾವು) | ಬಂಗಾಳ, ಅಸ್ಸಾಂ |
| 65. ಜುಗ್ಲಾಂಡಿಫರ್ | ಡಾರ್ಜೀಲಿಂಗ್ ಕುಕ್ರಿ ಸ್ನೇಕ್ (ಡಾರ್ಜೀಲಿಂಗ್ ಕುಕ್ರಿ ಹಾವು) | ಡಾರ್ಜೀಲಿಂಗ್ |
| 66. ಆಲ್ಬೊಸಿಂಕ್ಟಸ್ | ವೈಟ್ ಬಾರ್ಡ್ ಕುಕ್ರಿ ಸ್ನೇಕ್ (ಬಿಳಿ ಪಟ್ಟೆಯ ಕುಕ್ರಿ ಹಾವು) | ಪೂರ್ವ ಹಿಮಾಲಯ, ಅಸ್ಸಾಂ |
| 67. ಮೆಲಜೊನೊಟಸ್ | ವಾಲ್ಸ್ ಕುಕ್ರಿ ಸ್ನೇಕ್ (ವಾಲ್ಸ್ ಕುಕ್ರಿ ಹಾವು) | ಅಸ್ಸಾಂ |
| 68. ವುಡ್‌ಮಾಸೊನಿ | ಎಲ್ಲೋ ಸ್ಟ್ರಿಪ್ಡ್ ಕುಕ್ರಿ ಸ್ನೇಕ್ (ಹಳದಿ ಪಟ್ಟೆಯ ಕುಕ್ರಿ ಹಾವು) | ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು |
| 69. ಸಿನೆರಸ್ | ಬ್ಲ್ಯಾಕ್ ಬಾರ್ಡ್ ಕುಕ್ರಿ ಸ್ನೇಕ್ (ಕಪ್ಪು ಪಟ್ಟೆಯ ಕುಕ್ರಿ ಹಾವು) | ಅಸ್ಸಾಂ |
| 70. ಟೇನಿಯಾಲೇಟಸ್ | ರಸೆಲ್ಸ್ ಕುಕ್ರಿ ಸ್ನೇಕ್(ರಸೆಲ್ಸ್ ಕುಕ್ರಿ ಹಾವು) | ಭಾರತದಾದ್ಯಂತ |
| 71. ತಿಯೋಬಾಲ್ಡಿ | ಮ್ಯಾಂಡೆಲೇ ಕುಕ್ರಿ ಸ್ನೇಕ್ (ಮ್ಯಾಂಡೆಲೇ ಕುಕ್ರಿ ಹಾವು) | ಭಾರತದಾದ್ಯಂತ |
| 72. ವೀನಸ್ಟಸ್ | ಬ್ಲ್ಯಾಕ್ ಸ್ಪಾಟೆಡ್ ಕುಕ್ರಿ ಸ್ನೇಕ್ (ಕಪ್ಪು ಚುಕ್ಕೆಯ ಕುಕ್ರಿ ಹಾವು) | ಗೋವಾದ ದಕ್ಷಿಣಕ್ಕಿರುವ ಪಶ್ಚಿಮ ಘಟ್ಟಗಳು |
| 73. ಟ್ರಾವೆಂಕೂರಿಕಸ್ | ಟ್ರಾವೆಂಕೂರ್ ಕುಕ್ರಿ ಸ್ನೇಕ್ (ತಿರುವಾಂಕೂರು ಕುಕ್ರಿ ಹಾವು) | ಪಾಲ್ಘಾಟ್‌ನ ದಕ್ಷಿಣಕ್ಕೆ ಪಶ್ಚಿಮ ಘಟ್ಟಗಳು |
| 74. ಆರ್ನೆನ್ಸಿಸ್ | ಕಾಮನ್ ಕುಕ್ರಿ ಸ್ನೇಕ್ (ಸಾಮಾನ್ಯ ಕುಕ್ರಿ ಹಾವು) | ಭಾರತದಾದ್ಯಂತ |

| | | | |
|---|---|---|---|
| 75. | ಎರಿತ್ರೋರಾಕಿಸ್ | ರೆಡ್ ಸ್ಟ್ರಿಪ್ಡ್ ಕುಕ್ರಿ ಸ್ನೇಕ್ (ಕೆಂಪು ಪಟ್ಟೆ ಕುಕ್ರಿ ಹಾವು) | ಅಸ್ಸಾಂ |
| 76. | ಮೆಲನಿಯಸ್ | ಬ್ಲ್ಯಾಕ್ ಕುಕ್ರಿ ಸ್ನೇಕ್ (ಕಪ್ಪು ಕುಕ್ರಿ ಹಾವು) | ಡಾರ್ಜೀಲಿಂಗ್ |
| 77. | ಬ್ರೆವಿಕಾಡ | ಸ್ಟ್ರಿಪ್ಡ್ ಕುಕ್ರಿ ಸ್ನೇಕ್ (ಪಟ್ಟೆ ಕುಕ್ರಿ ಹಾವು) | ಗೋವಾದ ದಕ್ಷಿಣಕ್ಕಿರುವ ಪಶ್ಚಿಮ ಘಟ್ಟಗಳು |
| 78. | ಡಾಕ್ಸಾಲಿಸ್ | ಸ್ಪಾಟ್‌ಟೈಲ್ಡ್ ಕುಕ್ರಿ ಸ್ನೇಕ್ (ಚುಕ್ಕೆ ಬಾಲದ ಕುಕ್ರಿ ಹಾವು) | ಪೂರ್ವ ಹಿಮಾಲಯ |
| 79. | ಎರಿತ್ರೊಗ್ಯಾಸ್ಟರ್ | ರೆಡ್ ಬೆಲೀಡ್ ಕುಕ್ರಿ ಸ್ನೇಕ್ (ಕೆಂಪು ಕುಕ್ರಿ ಹಾವು) | ಪೂರ್ವ ಹಿಮಾಲಯ |
| 80. | ಅಫಿನಿಸ್ | ವೆಸ್ಟರ್ನ್ ಕುಕ್ರಿ ಸ್ನೇಕ್ (ಪಾಶ್ಚಿಮಾತ್ಯ ಕುಕ್ರಿ ಹಾವು) | ಗೋವಾದ ದಕ್ಷಿಣಕ್ಕಿರುವ ಪಶ್ಚಿಮ ಘಟ್ಟಗಳು |
| **ಕುಲ: ಕ್ಯಾಲಮೇರಿಯ** | | | |
| **ಪ್ರಭೇದಗಳು:** | | | |
| 81. | ಪಾವಿಮೆಂಟೇಟ | ಫಾಲ್ಸ್ ವುಲ್ಫ್ ಸ್ನೇಕ್ (ಖೊಟ್ಟಿ ತೋಳದ ಹಾವು) | ಅಸ್ಸಾಂ |
| **ಕುಲ: ಡೈನೋಡಾನ್** | | | |
| **ಪ್ರಭೇದಗಳು :** | | | |
| 82. | ಸೆಪ್ಟೆಂಟ್ರಿಯೋನಾಲಿಸ್ | ಗುಂತರ್ಸ್ ಫಾಲ್ಸ್ ವುಲ್ಫ್ ಸ್ನೇಕ್ (ಗುಂತರನ ಖೊಟ್ಟಿ ತೋಳದ ಹಾವು) | ಪೂರ್ವ ಹಿಮಾಲಯ, ಅಸ್ಸಾಂ |
| 83. | ಗ್ಯಾಮಿಯೆ | ಸಿಕ್ಕಿಂ ಫಾಲ್ಸ್ ವುಲ್ಫ್ ಸ್ನೇಕ್ (ಸಿಕ್ಕಿಂನ ಖೊಟ್ಟಿ ತೋಳದ ಹಾವು) | ಸಿಕ್ಕಿಂ, ಡಾರ್ಜೀಲಿಂಗ್ |
| **ಕುಲ: ಡ್ರೈಯೋಕ್ಯಾಲಮಸ್** | | | |
| **ಪ್ರಭೇದಗಳು:** | | | |
| 84. | ನಿಂಫ | ಕಾಮನ್ ಬ್ರೈಡಲ್ ಸ್ನೇಕ್ (ಸಾಮಾನ್ಯ ಕನ್ಯಾ ಹಾವು) | ದಕ್ಷಿಣ ಭಾರತ ಮತ್ತು ಒರಿಸ್ಸಾದ ಪೂರ್ವ ಕರಾವಳಿ |
| 85. | ಗ್ರಾಸಿಲಿಸ್ | ಗುಂತರ್ಸ್ ಬ್ರೈಡಲ್ ಸ್ನೇಕ್(ಗುಂತರ್ಸ್ ಕನ್ಯಾ ಹಾವು) | ಪಶ್ಚಿಮ ಘಟ್ಟಗಳು, ಒರಿಸ್ಸಾ |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| **ಕುಲ:ಟ್ರಾಕಿಶಿಯುಮ್** | | |
| **ಪ್ರಭೇದಗಳು :** | | |
| 86 . ಮೂಂಟಿಕೋಲ | ಅಸ್ಸಾಂ ಓರಿಯೆಂಟಲ್ ವರ್ಮ್ ಸ್ನೇಕ್ (ಅಸ್ಸಾಂನ ಓರಿಯಂಟಲ್ ಹುಳ-ಹಾವು) | ಅಸ್ಸಾಂ |
| 87 . ಫಸ್ಕಮ್ | ಡಾರ್ಜೀಲಿಂಗ್ ಓರಿಯೆಂಟಲ್ ವರ್ಮ್ ಸ್ನೇಕ್ (ಡಾರ್ಜೀಲಿಂಗ್ ಓರಿಯಂಟಲ್ ಹುಳ-ಹಾವು) | ಪೂರ್ವ ಹಿಮಾಲಯ |
| 88. ಗುಂಥೆರಿ | ಗುಂತರ್ಸ್ ಓರಿಯಂಟಲ್ ವರ್ಮ್ ಸ್ನೇಕ್ (ಗುಂತರ್ಸ್ ಓರಿಯಂಟಲ್ ಹುಳ-ಹಾವು) | ಸಿಕ್ಕಿಂ, ಡಾರ್ಜೀಲಿಂಗ್ |
| 89 . ಟೆನ್ಯುಸೆಪ್ಸ್ | ಆರೆಂಜ್ ಬೆಲ್ಟೆಡ್ ಓರಿಯಂಟಲ್ ವರ್ಮ್ ಸ್ನೇಕ್ (ಕಿತ್ತಳೆಪಟ್ಟಿಯ ಓರಿಯಂಟಲ್ ಹುಳ-ಹಾವು) | ಪೂರ್ವ ಹಿಮಾಲಯ |
| 90 . ಲೇವಿ | ಅಲಿವ್ ಓರಿಯಂಟಲ್ ವರ್ಮ್ ಸ್ನೇಕ್ (ಆಲಿವ್ ಓರಿಯಂಟಲ್ ಹುಳ-ಹಾವು) | ಪಶ್ಚಿಮ ಹಿಮಾಲಯ |
| **ಕುಲ:** ರಾಬ್ಡೋಪ್ಸ್ | ಫಾರೆಸ್ಟ್ ಸ್ನೇಕ್ (ಕಾಡು ಹಾವು) | |
| **ಪ್ರಭೇದಗಳು :** | | |
| 91 . ಒಲಿವಸಿಯಸ್ | ಆಲಿವ್ ಫಾರೆಸ್ಟ್ ಸ್ನೇಕ್ (ಆಲಿವ್ ಕಾಡು ಹಾವು) | ಪಶ್ಚಿಮ ಘಟ್ಟಗಳು(ವೈನಾಡ್) |
| 92 . ಬೈಕಲರ್ | ಎಲ್ಲೊ ಬೆಲೀಡ್ ಫಾರೆಸ್ಟ್ ಸ್ನೇಕ್ (ಹಳದಿ ಹೊಟ್ಟೆಯ ಕಾಡು ಹಾವು) | ಖಾಸಿ ಮತ್ತು ಮಿಶ್ಮಿ ಬೆಟ್ಟಗಳು, ಅಸ್ಸಾಂ |
| **ಕುಲ:** ಬ್ಲೈಥಿಯ | | |
| **ಪ್ರಭೇದ :** | | |
| 93 . ರೆಟಿಕುಲೇಟ | ಇರಿಡೆಸೆಂಟ್ ಸ್ನೇಕ್(ಹೊಳೆಯುವ ಹಾವು) | ಅಸ್ಸಾಂ |

ಕುಲ: ಟ್ರೈಲೊಫಿಸ್
ಪ್ರಭೇದಗಳು :

| | | |
|---|---|---|
| 94. ಪೆರೊಟೆಟಿ | ಸ್ಟ್ರೈಪ್ಡ್ ಸ್ಮಾಲ್ ಹೆಡೆಡ್ ಸ್ನೇಕ್ (ಪಟ್ಟಿಗಳ ಪುಟ್ಟತಲೆ ಹಾವು) | ನೈಋತ್ಯ ಘಟ್ಟಗಳು |
| 95. ಸ್ಟಿರೋರಿಂಕಸ್ | ಗುಂತರ್ಸ್ ಸ್ಮಾಲ್ ಹೆಡೆಡ್ ಸ್ನೇಕ್ (ಗುಂತರ್ಸ್ ಪುಟ್ಟತಲೆ ಹಾವು) | ನೈಋತ್ಯ ಘಟ್ಟಗಳು |

ಉಪ ಕುಟುಂಬ: ಸ್ಟೆಬಿನೋಫಿಸ್
ಕುಲ: ಸ್ಟೆಬಿನೋಫಿಸ್ — ಬ್ಲ್ಯಾಕ್ ಹೆಡೆಡ್ ಸ್ನೇಕ್ಸ್ (ಕಪ್ಪು ತಲೆ ಹಾವು)
ಪ್ರಭೇದಗಳು:

| | | |
|---|---|---|
| 96. ಕಾಲರಿಸ್ | ಕಾಲರ್ಡ್ ಬ್ಲ್ಯಾಕ್ ಹೆಡೆಡ್ ಸ್ನೇಕ್ (ಕೊರಳುಪಟ್ಟಿಯ ಕಪ್ಪು ತಲೆಹಾವು) | ಪೂರ್ವ ಹಿಮಾಲಯ |
| 97. ಸಬ್‌ಪಂಕ್ಟೇಟಸ್ | ಡ್ಯುಮೆರಿಲ್ಸ್ ಬ್ಲ್ಯಾಕ್ ಹೆಡೆಡ್ ಸ್ನೇಕ್ (ಡ್ಯುಮರಿಲ್ಸ್ ಕಪ್ಪುತಲೆ ಹಾವು) | ನೈಋತ್ಯ, ಮಧ್ಯ ಮತ್ತು ಈಶಾನ್ಯ ಭಾರತ |
| 98. ಬೈಸ್ಟ್ರಿಗೇಟಸ್ | ನಿಕೋಬಾರ್ ಬ್ಲ್ಯಾಕ್ ಹೆಡೆಡ್ ಸ್ನೇಕ್ (ನಿಕೋಬಾರ್ ಕಪ್ಪುತಲೆ ಹಾವು) | ಕಾಮೋರ್ಟ(ನಿಕೋಬಾರ್ ದ್ವೀಪಗಳು) |
| 99. ಸ್ಯಾಗಿಟೇರಿಯಸ್ | ಕ್ಯಾಂಟರ್ಸ್ ಬ್ಲ್ಯಾಕ್ ಹೆಡೆಡ್ ಸ್ನೇಕ್ (ಕ್ಯಾಂಟರ್ಸ್ ಕಪ್ಪು ತಲೆ ಹಾವು) | ಪಶ್ಚಿಮ ಹಿಮಾಲಯ,ಮಧ್ಯ ಮತ್ತು ಈಶಾನ್ಯ ಭಾರತ |

ಕುಟುಂಬ : ನ್ಯಾಟ್ರಿಸಿಡೆ
ಕುಲ : ನ್ಯಾಟ್ರಿಕ್ಸ್
ಪ್ರಭೇದಗಳು :

| | | |
|---|---|---|
| 100. ನಿಕೋಬಾರೆನ್ಸಿಸ್ | ನಿಕೋಬಾರ್ ವಾಟರ್ ಸ್ನೇಕ್(ನಿಕೋಬಾರ್ ನೀರುಹಾವು) | ಕಾಮೋರ್ಟಾ (ನಿಕೋಬಾರ್ ದ್ವೀಪಗಳು) |
| 101. ಪೀಲಿ | ಪೀಲ್ಸ್ ವಾಟರ್ ಸ್ನೇಕ್ (ಪೀಲ್ಸ್ ನೀರು ಹಾವು) | ಅಸ್ಸಾಂ |

ಕುಲ: ಅಂಫಿಸ್ಮ
ಪ್ರಭೇದಗಳು:

| | | |
|---|---|---|
| 102. ಸ್ಟೊಲಾಟ | ಸ್ಟ್ರೈಪ್ಡ್ ಕೀಲ್‌ಬ್ಯಾಕ್ (ಪಟ್ಟಿ ಬೆನ್ನೇಣು ಹಾವು) | ಭಾರತದಾದ್ಯಂತ |
| 103. ಬೆಡ್ಡೋಮಿ | ಬೆಡ್ಡೋಮ್ಸ್ ಕೀಲ್‌ಬ್ಯಾಕ್ (ಬೆಡ್ಡೋಮ್ಸ್ ಬೆನ್ನೇಣು ಹಾವು) | ಪಶ್ಚಿಮ ಘಟ್ಟಗಳು |
| 104. ಪ್ಯಾರಲೇಲ | ಬೌಲಿಂಗರ್ಸ್ ಕೀಲ್‌ಬ್ಯಾಕ್ (ಬೌಲಿಂಗರ್ಸ್ ಬೆನ್ನೇಣು ಹಾವು) | ಸಿಕ್ಕಿಂ, ಅಸ್ಸಾಂ |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| 105. ಖಾಸಿಯೆನ್ಸಿಸ್ | ಖಾಸಿ ಕೀಲ್‌ಬ್ಯಾಕ್ (ಖಾಸಿ ಬೆನ್ನೇಣು ಹಾವು) | ಅಸ್ಸಾಂ |
| 106. ಪ್ಲಾಟಿಸೆಪ್ಸ್ | ಮೌಂಟೇನ್ ಕೀಲ್‌ಬ್ಯಾಕ್ (ಪರ್ವತ ಬೆನ್ನೇಣು ಹಾವು) | ಹಿಮಾಲಯ, ಅಸ್ಸಾಂ |
| 107. ಮೊಡೆಸ್ಟ | ಗುಂತರ್ಸ್ ಕೀಲ್‌ಬ್ಯಾಕ್ (ಗುಂತರ್ಸ್ ಬೆನ್ನೇಣು ಹಾವು) | ಅಸ್ಸಾಂ |
| 108. ಜೆನುರ | ಚಿರಾಪುಂಜಿ ಕೀಲ್‌ಬ್ಯಾಕ್ (ಚಿರಾಪುಂಜಿ ಬೆನ್ನೇಣು ಹಾವು) | ಅಸ್ಸಾಂ |
| 109. ಮೊಂಟಿಕೊಲ | ಗ್ರೀನ್ ವೆಸ್ಟರ್ನ್ ಕೀಲ್‌ಬ್ಯಾಕ್ (ಹಸಿರು ಪಶ್ಚಿಮದ ಬೆನ್ನೇಣು ಹಾವು) | ಗೋವಾದ ದಕ್ಷಿಣಕ್ಕಿರುವ ಪಶ್ಚಿಮ ಘಟ್ಟಗಳು |

**ಕುಲ:** *ರಾಬ್ಡೊಫಿಸ್*
**ಪ್ರಭೇದಗಳು:**

| | | |
|---|---|---|
| 110. ಸಬ್‌ಮಿನಿಯೇಟ | ರೆಡ್ ನೆಕ್ಡ್ ಕೀಲ್‌ಬ್ಯಾಕ್ (ಕೆಂಪು ಕತ್ತಿನ ಬೆನ್ನೇಣು ಹಾವು) | ಪೂರ್ವ ಹಿಮಾಲಯ |
| 111. ಹಿಮಾಲಯಾನ | ಹಿಮಾಲಯನ್ ಕೀಲ್‌ಬ್ಯಾಕ್ (ಹಿಮಾಲಯದ ಬೆನ್ನೇಣು ಹಾವು) | ಪೂರ್ವ ಹಿಮಾಲಯ, ಅಸ್ಸಾಂ |

**ಕುಲ:** *ಸೂಡೊಕ್ಸೆನೋಡಾನ್*
**ಪ್ರಭೇದಗಳು:**

| | | |
|---|---|---|
| 112. ಮ್ಯಾಕ್ರೊಪ್ಸ್ | ಫಾಲ್ಸ್ ಕೋಬ್ರಾ (ಖೊಟ್ಟಿ ನಾಗರ) | ಪೂರ್ವ ಹಿಮಾಲಯ |

**ಕುಲ:** *ಮ್ಯಾಕ್ರೊಪಿಸ್ತೊಡಾನ್*
**ಪ್ರಭೇದಗಳು:**

| | | |
|---|---|---|
| 113. ಪ್ಲಂಬಿಕಲರ್ | ಗ್ರೀನ್ ಕೀಲ್‌ಬ್ಯಾಕ್ (ಹಸಿರು ಬೆನ್ನೇಣು ಹಾವು) | ಭಾರತದಾದ್ಯಂತ |

**ಕುಲ:** *ಜೆನೋಕ್ರೋಫಿಸ್*

**ಪ್ರಭೇದಗಳು:**

| | | |
|---|---|---|
| 114. *ಪಿಸ್ಕೇಟರ್* | ಚೆಕರ್ಡ್ ಕೀಲ್‌ಬ್ಯಾಕ್ ವಾಟರ್‌ಸ್ನೇಕ್ (ಚೌಕಳಿ ಬೆನ್ನೇಣು ನೀರು ಹಾವು) | ಭಾರತದಾದ್ಯಂತ |
| 115. *ಸೆರಸೊಗ್ಯಾಸ್ಟರ್* | ಡಾರ್ಕ್ ಬೆಲೀಡ್ ಮಾರ್ಶ್ ಸ್ನೇಕ್ (ಕಪ್ಪು ಉದರದ ಜೌಗು ಹಾವು) | ಉತ್ತರ ಪ್ರದೇಶ, ಬಂಗಾಳ, ಅಸ್ಸಾಂ |

**ಕುಲ :** *ಅಟ್ರೆಶಿಯಮ್*

**ಪ್ರಭೇದಗಳು:**

| | | |
|---|---|---|
| 116. *ಶಿಷ್ಟೋಸಂ* | ಆಲಿವ್ ಕೀಲ್‌ಬ್ಯಾಕ್ ವಾಟರ್‌ಸ್ನೇಕ್ (ಆಲಿವ್ ಬೆನ್ನೇಣು ನೀರುಹಾವು) | ಹಿಮಾಲಯ ಬಿಟ್ಟು ಭಾರತದಾದ್ಯಂತ |

**ಕುಟುಂಬ :** *ಆಕ್ರೊಕಾರ್ಡಿಡೆ*

**ಕುಲ:** *ಆಕ್ರೊಕಾರ್ಡಸ್*

**ಪ್ರಭೇದ :**

| | | |
|---|---|---|
| 117. *ಗ್ರಾನುಲೇಟಸ್* | ಫೈಲ್ ಸ್ನೇಕ್ (ಫೈಲ್ ಹಾವು) | ಪಶ್ಚಿಮ ಕರಾವಳಿ, ಈಶಾನ್ಯ ಕರಾವಳಿ, ನಿಕೋಬಾರ್ ದ್ವೀಪಗಳು |

**ಕುಟುಂಬ :** *ಕೋಲಬ್ರಿಡೆ*

**ಉಪ ಕುಟುಂಬ:** *ಕೊಲುಬ್ರಿನೆ*

**ಕುಲ :** *ಎಲಾಫೆ*

**ಪ್ರಭೇದಗಳು:**

| | | |
|---|---|---|
| 118. *ಪ್ರಸಿನ* | ಗ್ರೀನ್ ಟ್ರಿಂಕೆಟ್ ಸ್ನೇಕ್ (ಹಸಿರು ಟ್ರಿಂಕೆಟ್ ಸರ್ಪ) | ಪೂರ್ವಹಿಮಾಲಯ, ಅಸ್ಸಾಂ, ಅಂಡಮಾನ್ ದ್ವೀಪಗಳು |
| 119. *ಫ್ರೆನೇಟ* | ಅಸ್ಸಾಂ ಟ್ರಿಂಕೆಟ್ ಸ್ನೇಕ್ (ಅಸ್ಸಾಂ ಟ್ರಿಂಕೆಟ್ ಸರ್ಪ) | ಅಸ್ಸಾಂ |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| 120. ರೇಡಿಯೇಟ | ಕಾಪರ್ ಹೆಡ್ ಟ್ರಿಂಕೆಟ್ ಸ್ನೇಕ್ (ತಾಮ್ರತಲೆಯ ಟ್ರಿಂಕೆಟ್ ಸರ್ಪ) | ಒರಿಸ್ಸ, ಪೂರ್ವ ಹಿಮಾಲಯ |
| 121. ಹೆಲೆನ | ಕಾಮನ್ ಟ್ರಿಂಕೆಟ್ ಸ್ನೇಕ್ (ಸಾಮಾನ್ಯ ಟ್ರಿಂಕೆಟ್ ಸರ್ಪ) | ಭಾರತದಾದ್ಯಂತ |
| 122. ಟನಿಯುರ | ಸ್ಟ್ರಿಪ್ಡ್ ಟ್ರಿಂಕೆಟ್ ಸ್ನೇಕ್(ಪಟ್ಟಿ ಟ್ರಿಂಕೆಟ್ ಹಾವು) | ಡಾರ್ಜೀಲಿಂಗ್ |
| 123. ಹಾಡ್ಗಸೊನಿ | ಹಿಮಾಲಯನ್ ಟ್ರಿಂಕೆಟ್ ಸ್ನೇಕ್ (ಹಿಮಾಲಯ ಟ್ರಿಂಕೆಟ್ ಹಾವು) | ಕಾಶ್ಮೀರದಿಂದ ಸಿಕ್ಕಿಂವರೆಗಿನ ಹಿಮಾಲಯ, ಅಸ್ಸಾಂ |
| 124. ಕಾಂಟೊರಿಸ್ | ಈಸ್ಟರ್ನ್ ಟ್ರಿಂಕೆಟ್ ಸ್ನೇಕ್(ಪೂರ್ವ ಟ್ರಿಂಕೆಟ್ ಹಾವು) | ಪೂರ್ವ ಹಿಮಾಲಯ |
| 125. ಫ್ಲಾವೊಲೀನಿಯೇಟ | ಎಲ್ಲೊ ಸ್ಟ್ರಿಪ್ಡ್ ಟ್ರಿಂಕೆಟ್ ಸ್ನೇಕ್ (ಹಳದಿ ಪಟ್ಟಿಯ ಟ್ರಿಂಕೆಟ್ ಹಾವು) | ಅಂಡಮಾನ್ ದ್ವೀಪಗಳು |
| 126. ಪಾರ್ಫಿರೇಸಿಯ | ಬ್ಲಾಕ್ ಬ್ಯಾಂಡೆಡ್ ಟ್ರಿಂಕೆಟ್ ಸ್ನೇಕ್ (ಕಪ್ಪು ಪಟ್ಟಿ ಟ್ರಿಂಕೆಟ್ ಹಾವು) | ಪೂರ್ವ ಹಿಮಾಲಯ, ಅಸ್ಸಾಂ |
| ಕುಲ: ಗೊನ್ಯೋಸೊಮ | | |
| ಪ್ರಭೇದ : | | |
| 127. ಆಕ್ಸಿಸೆಫಾಲಮ್ | ರೆಡ್ ಟೈಲ್ಡ್ ಟ್ರಿಂಕೆಟ್ ಸ್ನೇಕ್ (ಕೆಂಪು ಬಾಲದ ಟ್ರಿಂಕೆಟ್ ಹಾವು) | ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು |
| ಕುಲ : ಟೈಯಾಸ್ | | |
| ಪ್ರಭೇದ : | | |
| 128. ಮ್ಯುಕೊಸಸ್ | ರ್‍ಯಾಟ್ ಸ್ನೇಕ್ ಅಥವಾ ಧಮನ್ (ಕೇರೆ ಹಾವು ಅಥವಾ ಧಮನ್) | ಭಾರತದಾದ್ಯಂತ |

ಕುಲ: ಜಾವ್ರೊಸ್ಪೈಸ್
ಪ್ರಭೇದಗಳು:

| | | |
|---|---|---|
| 129. ನಿಗ್ರೊಮಾರ್ಜಿನೇಟಸ್ | ಗ್ರೀನ್ ರ್‍ಯಾಟ್ ಸ್ನೇಕ್ (ಹಸಿರು ಕೇರೆ ಹಾವು) | ಪೂರ್ವ ಹಿಮಾಲಯ |

ಕುಲ: ಆರ್ಗೈರೊಜಿನ
ಪ್ರಭೇದಗಳು:

| | | |
|---|---|---|
| 130 . ವೆಂಟ್ರೊಮಾಕುಲೇಟಸ್ | ಗ್ಲಾಸಿ ಬೆಲೀಡ್ ರೇಸರ್(ಹೊಳಪು ಹೊಟ್ಟೆಯ ರೇಸರ್) | ಪಶ್ಚಿಮ ಹಿಮಾಲಯ, ವಾಯವ್ಯ ಭಾರತದ ಬಯಲು ಸೀಮೆ |
| 131 . ಫ್ಯಾಸಿಯೋಲೇಟಸ್ | ಬ್ಯಾಂಡೆಡ್ ರೇಸರ್(ಪಟ್ಟಿ ರೇಸರ್) | ವಾಯವ್ಯ ಭಾಗ ಬಿಟ್ಟು ಭಾರತದಾದ್ಯಂತ |
| 132 . ಗ್ರಾಸಿಲಿಸ್ | ಗುಂತರ್ಸ್ ರೇಸರ್(ಗುಂತರ್ಸ್ ರೇಸರ್) | ಮಹಾರಾಷ್ಟ್ರ, ಮಧ್ಯಪ್ರದೇಶ |

ಕುಲ: ಸ್ಪಾಲೆರೊಸೊಫಿಸ್
ಪ್ರಭೇದಗಳು :

| | | |
|---|---|---|
| 133 . ಡೈಯಾಡೆಮ | ರಾಯಲ್ ಸ್ನೇಕ್ (ರಾಜ ಸರ್ಪ) | ವಾಯವ್ಯ ಭಾರತ (ಉತ್ತರ ಪ್ರದೇಶ, ರಾಜಸ್ಥಾನ, ಪಂಜಾಬ್) |
| 134. ಆರೆನೇರಿಯಸ್ | ರೆಡ್ ಸ್ಪಾಟೆಡ್ ಸ್ನೇಕ್(ಕೆಂಪು ಚುಕ್ಕೆಯ ಹಾವು) | ರಾಜಾಸ್ಥಾನ |

ಕುಲ: ಒಫಿಯೊಡ್ರಿಸ್
ಪ್ರಭೇದ:

| | | |
|---|---|---|
| 135 . ಡೊರಿಯೆ | ಗ್ರೀನ್ ಸ್ನೇಕ್(ಹಸಿರು ಹಾವು) | ಮಣಿಪುರ |
| ಕುಲ: ಲಿಯೊಪೆಲ್ಟಿಸ್ | ಸ್ಟ್ರೈಪ್ಡ್ ನೆಕ್ ಸ್ನೇಕ್(ಶಿರದಲ್ಲಿ ಪಟ್ಟೆಗಳಿರುವ ಹಾವು) | |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| **ಪ್ರಭೇದಗಳು:** | | |
| 136. ಫ್ರೆನೇಟಸ್ | ಸ್ಟ್ರೈಪ್ಡ್ ನೆಕ್ ಸ್ನೇಕ್ (ಶಿರ ಪಟ್ಟಿ ಹಾವು) | ಅಸ್ಸಾಂ |
| 137. ಸ್ಟೊಲಿಜ್ಕೆ | ಸ್ಟೊಲಿಜ್ಕಸ್ ಸ್ಟ್ರೈಪ್ಡ್ ನೆಕ್ ಸ್ನೇಕ್(ಸ್ಟೊಲಿಜ್ಕ ಶಿರ ಪಟ್ಟಿ ಹಾವು) | ಸಿಕ್ಕಿಂ, ಡಾರ್ಜೀಲಿಂಗ್, ಅಸ್ಸಾಂ |
| 138. ಕಾಲಮೇರಿಯ | ಲೆಸ್ಸರ್ ಸ್ಟ್ರೈಪ್ಡ್ ನೆಕ್ ಸ್ನೇಕ್(ಕಡಿಮೆ ಶಿರಪಟ್ಟಿಗಳ ಹಾವು) | ವಾಯವ್ಯ ತುದಿಯನ್ನು ಬಿಟ್ಟು ಭಾರತದಾದ್ಯಂತ ಇರುವ ಬೆಟ್ಟ ಪ್ರದೇಶಗಳು |
| 139. ನಿಕೊಬಾರಿಯನ್ಸಿಸ್ | ನಿಕೋಬಾರ್ ಸ್ಟ್ರೈಪ್ಡ್ ನೆಕ್ ಸ್ನೇಕ್ (ನಿಕೋಬಾರ್ ಪಟ್ಟಿ ಕತ್ತು ಹಾವು) | ಕಾಮೊರ್ರ(ನಿಕೋಬಾರ್ ದ್ವೀಪಗಳು) |
| 140. ರಪ್ಪಿ | ಹಿಮಾಲಯನ್ ಸ್ಟ್ರೈಪ್ಡ್ ನೆಕ್ ಸ್ನೇಕ್ (ಹಿಮಾಲಯ ಪಟ್ಟಿ ಕತ್ತು ಹಾವು) | ಹಿಮಾಲಯ |
| **ಕುಲ:** ಕರೊನೆಲ್ಲ | | |
| **ಪ್ರಭೇದ :** | | |
| 141. ಬ್ರಾಕಿಯುರ | ಸ್ಮೂತ್ ಸ್ನೇಕ್ (ನುಣುಪು ಹಾವು) | ಉತ್ತರ ಮಹಾರಾಷ್ಟ್ರ |
| **ಕುಲ:** ಡೆಂಡ್ರೆಲಾಫಿಸ್ | ಟ್ರೀ ಸ್ನೇಕ್ (ಮರ ಹಾವು) | |
| **ಪ್ರಭೇದ :** | | |
| 142. ಪಿಕ್ಟಸ್ | ಪೈಯಿಂಟೆಡ್ ಬ್ರೋನ್ಜ್ ಬ್ಯಾಕ್ ಟ್ರೀ ಸ್ನೇಕ್ (ಪಟ್ಟಿ ಕಂಚು ಬೆನ್ನಿನ ಮರ ಹಾವು) | ಭಾರತದಾದ್ಯಂತ |
| 143. ಸಿಯನೋಕ್ಲೋರಿಸ್ | ಗ್ರೀನ್ ಬ್ರೋನ್ಜ್ ಬ್ಯಾಕ್ ಟ್ರೀ ಸ್ನೇಕ್ (ಹಸಿರು-ಕಂಚು ಬೆನ್ನಿನ ಮರ ಹಾವು) | ಡಾರ್ಜೀಲಿಂಗ್,ಅಸ್ಸಾಂ, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು |

| | | |
|---|---|---|
| 144. *ಗ್ರಾಂಡೊಕುಲಿಸ್* | ಲಾರ್ಜ್ ಐಡ್ ಬ್ರೋನ್ಜ್ ಟ್ರೀ ಸ್ನೇಕ್ (ದೊಡ್ಡ ಕಣ್ಣಿನ ಕಂಚು ಬೆನ್ನಿನ ಮರ ಹಾವು) | ನೈಋತ್ಯ ಘಟ್ಟಗಳು |
| 145. *ಗೋರೈ* | ಹಿಮಾಲಯನ್ ಬ್ರೋನ್ಜ್ ಬ್ಯಾಕ್ ಟ್ರೀ ಸ್ನೇಕ್ (ಹಿಮಾಲಯದ ಕಂಚು ಬೆನ್ನಿನ ಮರ ಹಾವು) | ಪೂರ್ವ ಹಿಮಾಲಯ, ಅಸ್ಸಾಂ |
| 146. *ಬೈಪ್ರನಾಲಿಸ್* | ಬೌಲಿಂಗರ್ಸ್ ಬ್ರೋನ್ಜ್ ಬ್ಯಾಕ್ ಟ್ರಿ ಸ್ನೇಕ್ (ಬೌಲಿಂಗರ್ಸ್ ಕಂಚು ಬೆನ್ನಿನ ಮರ ಹಾವು) | ಪಶ್ಚಿಮ ಭಾರತ |
| 147. *ಕಾಡೋಲಿಸಿಯೇಟ* | ಸ್ಟ್ರಿಪ್ಡ್ ಟೈಲ್ಡ್ ಬ್ರೋನ್ಜ್ ಬ್ಯಾಕ್ ಟ್ರೀ ಸ್ನೇಕ್ (ಪಟ್ಟಿ ಬಾಲದ ಕಂಚು ಬೆನ್ನಿನ ಮರ ಹಾವು) | ದಕ್ಷಿಣ ಕೇರಳ, ರಾಮನಾಥಪುರ ಜಿಲ್ಲೆ, ತಮಿಳು ನಾಡು |
| 148. *ಟ್ರಿಸ್ಟಿಸ್* | ಕಾಮನ್ ಬ್ರೋನ್ಜ್ ಬ್ಯಾಕ್ ಟ್ರೀ ಸ್ನೇಕ್ (ಸಾಮಾನ್ಯ ಕಂಚು ಬೆನ್ನಿನ ಮರ ಹಾವು) | ಭಾರತದಾದ್ಯಂತ |
| **ಕುಲ:** *ಕ್ರೈಸೋಪಿಲಿಯ* | ಫ್ಲೈಯಿಂಗ್ ಸ್ನೇಕ್ಸ್(ಹಾರುವ ಹಾವುಗಳು) | |
| **ಪ್ರಭೇದಗಳು:** | | |
| 149. *ಒರೊನೆಟ* | ಆರ್ನೇಟ್ ಫ್ಲೈಯಿಂಗ್ ಸ್ನೇಕ್(ಆರ್ನೇಟ್ ಹಾರುವ ಹಾವು) | ಗೋವಾದ ದಕ್ಷಿಣಕ್ಕಿರುವ ಪಶ್ಚಿಮ ಘಟ್ಟಗಳು, ಒರಿಸ್ಸ, ಬಂಗಾಳ, ಅಸ್ಸಾಂ, ಬಿಹಾರ, ತ್ರಿಪುರ |
| 150. *ಪ್ಯಾರಡೈಸಿ* | ಪ್ಯಾರಡೈಸ್ ಫ್ಲೈಯಿಂಗ್ ಸ್ನೇಕ್(ವನದ ಹಾರುವ ಹಾವು) | ನಾರ್ಕೊಂಡಂ, ಅಂಡಮಾನ್ ದ್ವೀಪಗಳು |
| **ಕುಲ:** *ಸಾಮೋಫಿಸ್* | ಸ್ಯಾಂಡ್ ಸ್ನೇಕ್ (ಮರಳು ಹಾವು) | |
| **ಪ್ರಭೇದಗಳು:** | | |
| 151. *ಶೋಕರಿ* | ಡೆಸರ್ಟ್ ಸ್ಯಾಂಡ್ ಸ್ನೇಕ್(ಮರಳುಗಾಡಿನ ಮರಳು ಹಾವು) | ರಾಜಾಸ್ಥಾನ, ಪಂಜಾಬ್, ಕಾಶ್ಮೀರ |
| 152. *ಕೊಂಡನಾರಸ್* | ಹಿಮಾಲಯನ್ ಸ್ಯಾಂಡ್ ಸ್ನೇಕ್(ಹಿಮಾಲಯದ ಮರಳ ಹಾವು) | ಪಶ್ಚಿಮ ಹಿಮಾಲಯ ಮತ್ತು ಮಧ್ಯೋತ್ತರ ಭಾರತ |
| 153. *ಲಾಂಗಿಫ್ರಾನ್ಸ್* | ಸ್ಟೌಟ್ ಸ್ಯಾಂಡ್ ಸ್ನೇಕ್(ಸ್ಥೂಲ ಮರಳ ಹಾವು) | ಮಹಾರಾಷ್ಟ್ರ |
| 154. *ಲೈಥಿ* | ಲೈಥ್ಸ್ ಸ್ಯಾಂಡ್ ಸ್ನೇಕ್(ಲೈಥ್ ಮರಳ ಹಾವು) | ಪಶ್ಚಿಮ ಭಾರತ, ಪೂನಾದಿಂದ ಕಾಶ್ಮೀರ |

| ವೈಜ್ಞಾನಿಕ ಹೆಸರು | ಇಂಗ್ಲಿಷ್ ಹೆಸರು | ವಾಸ ಸ್ಥಳ |
|---|---|---|
| **ಕುಲ:** ಸಾಮೊಡೈನಾಸ್ಟಿಸ್ | | |
| **ಪ್ರಭೇದಗಳು:** | | |
| 155 . ಪಲ್ವರುಲೆಂಟಸ್ | ಮಾಕ್ ವೈಪರ್ (ನಕಲಿ ಮಂಡಲ) | ಪೂರ್ವ ಹಿಮಾಲಯ |
| **ಕುಲ:** ಏಹೆಟುಲ್ಲ | ವೈನ್ ಸ್ನೇಕ್ಸ್ (ಹಸಿರು ಹಾವುಗಳು) | |
| **ಪ್ರಭೇದಗಳು:** | | |
| 156. ಪೆರೊಟಿಟಿ | ಬ್ರೋನ್ಜ್ ಹೆಡೆಡ್ ವೈನ್ ಸ್ನೇಕ್ (ಕಂಚು ತಲೆಯ ಹಸಿರು ಹಾವು) | ನೈಋತ್ಯ ಘಟ್ಟಗಳು |
| 157 . ಡಿಸ್ಪರ್ | ಗುಂತರ್ಸ್ ವೈನ್ ಸ್ನೇಕ್ (ಗುಂತರ್ ಹಸಿರು ಹಾವು) | ನೈಋತ್ಯ ಘಟ್ಟಗಳು |
| 158 . ಫ್ರಾಂಟಿಸಿಂಗ್ಟಸ್ | ರಿವರ್ ವೈನ್ ಸ್ನೇಕ್(ನದಿ ಹಸಿರು ಹಾವು) | ಡಾರ್ಜೀಲಿಂಗ್, ಅಸ್ಸಾಂ |
| 159 . ಪ್ರಾಸಿನಸ್ | ಶಾರ್ಟ್ ನೋಸ್ಡ್ ವೈನ್ ಸ್ನೇಕ್ (ಚಿಕ್ಕ ಮೂಗಿನ ಹಸಿರು ಹಾವು) | ಪೂರ್ವ ಹಿಮಾಲಯ |
| 160 . ನಾಸುಟಸ್ | ಕಾಮನ್ ವೈನ್ ಸ್ನೇಕ್ (ಸಾಮಾನ್ಯ ಹಸಿರು ಹಾವು) | ವಾಯುವ್ಯ ಭಾಗ ಬಿಟ್ಟು ಭಾರತದಾದ್ಯಂತ |
| 161 . ಪಲ್ವರುಲೆಂಟಸ್ | ಬ್ರೌನ್ ವೈನ್ ಸ್ನೇಕ್ (ಕಂದು ಹಸಿರು ಹಾವು) | ನೈಋತ್ಯ ಘಟ್ಟಗಳು |
| **ಕುಟುಂಬ:** ಹೋಮಲಾಪ್ಸಿಡೆ | | |
| **ಉಪ ಕುಟುಂಬ:** ಬಾಯ್ಗಿನೆ | | |
| **ಕುಲ:** ಬೊಯ್ಗ | ಕ್ಯಾಟ್ ಸ್ನೇಕ್ (ಬೆಕ್ಕು ಹಾವು) | |
| **ಪ್ರಭೇದಗಳು:** | | |
| 162 . ಮಲ್ಟಿಮ್ಯಾಕುಲೇಟ | ಲಾರ್ಜ್ ಸ್ಪಾಟೆಡ್ ಕ್ಯಾಟ್ ಸ್ನೇಕ್ (ದಪ್ಪ ಚುಕ್ಕೆಯ ಬೆಕ್ಕು ಹಾವು) | ಅಸ್ಸಾಂ |
| 163 . ಒಕ್ರಸಿಯ | ಟಾನಿ ಕ್ಯಾಟ್ ಸ್ನೇಕ್ (ಕಪಿಲ ವರ್ಣದ ಬೆಕ್ಕು ಹಾವು) | ಪೂರ್ವ ಹಿಮಾಲಯ, ಅಸ್ಸಾಂ, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು |

